

ದೀನ ನಾನು ಸಮಸ್ತ ಲೋಕಕೆ
ದಾನಿ ನೀನು ವಿಚಾರಿಸಲು ಮತಿ
ಹೀನ ನಾನು ಮಹಾಮಹಿಮ ಕೈವಲ್ಯಪತಿ ನೀನು
ಏನ ಬಲ್ಲೆನು ನಾನು ನೆರೆ ಸು
ಜ್ಞಾನ ಮೂರುತಿ ನೀನು ನಿನ್ನ ಸ
ಮಾನರುಂಟೇ ದೇವ ರಕ್ಷಿಸು ನಮ್ಮನನವರತ

ಗಿಳಿಯ ಮರಿಯನು ತಂದು ಪಂಜರ
ದೊಳಗೆ ಪೋಷಿಸಿ ಕಲಿಸಿ ಮೃದುನುಡಿ
ಗಳನು ಲಾಲಿಸಿ ಕೇಳ್ವ ಪರಿಣತರಂತೆ ನೀ ನನಗೆ
ತಿಳುಹಿ ಮತಿಯನು ಎನ್ನ ಜಿಹ್ವೆಗೆ
ಮೊಳಗುವಂದದಿ ನಿನ್ನ ನಾಮಾ
ವಳಿಯ ಪೊಗಳಿಕೆಯಿತ್ತು ರಕ್ಷಿಸು ನಮ್ಮನನವರತ

---ಶ್ರೀ ಕನಕದಾಸರು

ಸಂದರ್ಶಿಸಿ ಆನಂದಿಸಿ

# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ, ತಿರುಚಾನೂರು.





# ವಾರ್ಷಿಕ ಬ್ರಹ್ಮೋತ್ಸವಗಳು

20--11--92 ರಿಂದ 29--11--92 ವರೆಗೆ

## ಕಾರ್ಯಕ್ರಮ ವಿವರ

| ದಿನಾಂಕ | ವಾರ | ಹಗಲು | ರಾತ್ರಿ |
|---|---|---|---|
| 20--11--92 | ಶುಕ್ರವಾರ | - -- | ಅಂಕುರಾರ್ಪಣ |
| 21--11--92 | ಶನಿವಾರ | ಧ್ವಜಾರೋಹಣ | ಚಿಕ್ಕ ಶೇಷವಾಹನ |
| 22--11--92 | ಭಾನುವಾರ | ಟಾಂಜಾನ್ ಉತ್ಸವ | ಹಂಸವಾಹನ |
| 23--11--92 | ಸೋಮವಾರ | ಮುತ್ತಿನ ಚಪ್ಪರವಾಹನ | ಸಿಂಹವಾಹನ |
| 24--11--92 | ಮಂಗಳವಾರ | ಕಲ್ಪವೃಕ್ಷವಾಹನ | ಹನುಮದ್ವಾಹನ |
| 25--11--92 | ಬುಧವಾರ | ಪಲ್ಲಕ್ಕಿ ಉತ್ಸವ<br>- ಸಂಜೆ -ವಸಂತೋತ್ಸವ | <br>ಗಜವಾಹನ |
| 26--11--92 | ಗುರುವಾರ | ಸರ್ವಭೂಪಾಲವಾಹನ | ಗರುಡೋತ್ಸವ |
| 27--11--92 | ಶುಕ್ರವಾರ | ಸೂರ್ಯಪ್ರಭವಾಹನ | ಚಂದ್ರಪ್ರಭವಾಹನ |
| 28--11--92 | ಶನಿವಾರ | ರಥೋತ್ಸವ | ಅಶ್ವವಾಹನ |
| 29--11--92 | ಭಾನುವಾರ | ಪಲ್ಲಕ್ಕಿ ಉತ್ಸವ, ತೀರ್ಥವಾರಿ | ಧ್ವಜಾವರೋಹಣ |

ಸೂಚನೆ ಬ್ರಹ್ಮೋತ್ಸವದ ದಿನಗಳಲ್ಲಿ ದಿನವೂ ಸಂಗೀತ ಹರಿಕಥೆ, ಮೊದಲಾದ ಸಾಂಸ್ಕೃತಿಕ ಕಾರ್ಯಕ್ರಮಗಳಿರುತ್ತವೆ ಹೆಚ್ಚಿನ ವಿವರಗಳಿಗೆ ತಮ್ಮ ಬಳಿಯ ತಿ ತಿ ದೇ ವಿಚಾರಣಾ ಕಚೇರಿಯಲ್ಲಿ ಕೇಳಿ ತಿಳಿಯಿರಿ

ನೀವೂ ಬನ್ನಿ ತಿ ತಿ ದೇ ನಿಮ್ಮವರನ್ನೂ ಕರೆತನ್ನಿ





ಲೇಖನ/ಜಾಹೀರಾತುಗಳಿಗೆ
ಮಿಕ್ಕ ವಿವರಗಳಿಗೆ
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ

ಸಪ್ತಗಿರಿಯ ಎಲ್ಲ ಭಾಷೆಯ ಪ್ರತಿಗಳೂ
ಎಲ್ಲ ತಿ ತಿ ದೇ ವಿಚಾರಣಾಕೇಂದ್ರಗಳಲ್ಲಿ
ದೊರೆಯುವುವು.

**ಬಿಡಿ ಪ್ರತಿ ೧--೦೦**
**ವಾರ್ಷಿಕ ಚಂದಾ ೧೨--೦೦**

ಸಪ್ತಗಿರಿಯಲ್ಲಿ ಪ್ರಕಟವಾಗುವ ಲೇಖನಗಳಲ್ಲಿನ ಅಭಿಪ್ರಾಯಗಳು ಸಂಪಾದಕ ವರ್ಗದ, ಪತ್ರಿಕೆಯ, ಅಭಿಪ್ರಾಯಗಳೇ ಆಗಿರಬೇಕು ಎಂದಿಲ್ಲ ---ಸಂ||

ಸಂಪುಟ ೨೩] ನವಂಬರ್ ೧೯೯೨ [ಸಂಚಿಕೆ ೬

# ವಿಷಯಸೂಚಿ



ಮುಖಚಿತ್ರ ಶ್ರೀ ವೆಂಕಟೇಶ್ವರ ಸ್ವಾಮಿ ಬ್ರಹ್ಮೋತ್ಸವದ ವಾಹನ ಸೇವೆಗಳು
ಹಿಂಬದಿಯಲ್ಲಿ ತಿರುಮಲೆ ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯ
ಒಳಗಡೆ ಭಾರತದ ರಾಷ್ಟ್ರಪತಿ ಡಾ.ಶಂಕರದಯಾಳ ಶರ್ಮ ಅವರು
**ತಿರುಮಲೆ ತಿರುಚಾನೂರುಗಳನ್ನು ಸಂದರ್ಶಿಸಿದಾಗ ತೆಗೆದ ಚಿತ್ರಗಳು**




ಒಳ್ಳೆಯ ಕೆಲಸ ಮಾಡಿದವನನ್ನು ಆ ಕೆಲಸದ ಬೆಲೆಯರಿತವರ ಸಭೆಯಲ್ಲಿ ಶ್ಲಾಘಿಸಿ ಸತ್ಕರಿಸಬೇಕಂತೆ - ಇದು ಮಹಾಭಾರತದ ಮಾತು ದಿನವೂ ಮನುಷ್ಯ ತಾನು ಬದುಕುವುದರೊಡನೆಯೇ ಇತರರ ಜೀವನದಲ್ಲಿ ಪ್ರಭಾವ ಪರಿಣಾಮ ಬೀರುವ ಅನೇಕ ಕಾರ್ಯಗಳನ್ನು ಮಾಡುತ್ತಲೇ ಇರುತ್ತಾನೆ ಅದು ಅನಿವಾರ್ಯವೂ ಹೌದು ಆಹಾರ ನಿದ್ರಾಭಯ ಮೈಥುನಗಳಲ್ಲಿ ಬದ್ಧನಾದವ ಮಾಡುವ ಕೆಲಸಗಳಲ್ಲಿ ಕೆಟ್ಟದ್ದು ಎನ್ನಬಹುದಾದ್ದೂ, ಪರಿಣಾಮ ರಹಿತ ಎನ್ನಬಹುದಾದವೂ ಬಹಳಷ್ಟು ಇರಲಿಕ್ಕೆ ಸಾಕು ಅಂತಲ್ಲಿ ಒಬ್ಬನಿಂದ ಒಳಿತಾದಾಗ ಅದನ್ನು ನಾಲ್ಕು ಜನಕ್ಕೆ ತಿಳಿಸಿ, ಅವನು ಅದೇ ಒಳಿತಿನ ಹಾದಿಯಲ್ಲಿ ಮುಂದುವರೆಯಲ್ಲಿ ಪ್ರೋತ್ಸಾಹಿಸುವುದರಿಂದ ಒಳಿತಿನ ಬೆಳೆ ಹೆಚ್ಚುತ್ತದೆ ಎಂಬುದಂತೂ ಸಿದ್ಧವಿಷಯ

ಜಗತ್ತಿನಲ್ಲಿ ಪಾಪಕಾರ್ಯಗಳನ್ನು ಕೆಟ್ಟ ಕೆಲಸಗಳನ್ನು ಮಾಡಿದವರು ಇಲ್ಲವೆಂದೂ ಅಲ್ಲ, ಅವರು ಮನ್ನಣೆ ಗಳಿಸಲಿಲ್ಲವೆಂದೂ ಅಲ್ಲ ಮನುಷ್ಯನ ಒಳಿತು ಕೆಡುಕುಗಳು ಬೇಗ ಮರೆವಿಗೆ ಈಡಾಗಿ ತಪ್ಪು ಕಾರಣಗಳಿಂದ ಒಬ್ಬ ಪ್ರಸಿದ್ಧನಾಗುತ್ತಾನೆ ಅಥವಾ ಅನಾಮಿಕನಾಗುತ್ತಾನೆ ಎಂಬುದರಿಂದಾಗಿ, ಕೆಡುಕನ್ನು ಕೂಡಲೇ ಖಂಡಿಸಬೇಕಾದ ಅಗತ್ಯವಿರುವಂತೆ ಒಳಿತನ್ನು ಪ್ರಶಂಸಿಸಬೇಕಾದ್ದೂ ಕರ್ತವ್ಯವೇ ಆಗುತ್ತದೆ

ಸ್ಥಿತಪ್ರಜ್ಞರ ಎತ್ತರವನ್ನು ಮುಟ್ಟಿದವರ ವಿಷಯ ದೂರ ಅವರಿಗೆ ಸರ್ವ ಮಾನವಾಳಿಯ ಮೇಲ್ಮೆಯೊಂದೇ ಗುರಿ ಇತರರ ನಿಂದಾ ಸ್ತುತಿಗಳಿಗೆ ಅವರುಗಳು ಅತೀತರು ಆದರೆ ಅಂತಹವರು ಎಷ್ಟು ಮಂದಿ ಇದ್ದಾರು ಸಾಮಾನ್ಯ ಪರಿಸರದ ಸಮಾಜದಲ್ಲಿ ಸುತ್ತ ನಮ್ಮಂತಹ ಬದ್ಧರೇ ಇರುವ ಪರಿಸ್ಥಿತಿಯಲ್ಲಿ ಪರಮಹಂಸ, ವಿವೇಕಾನಂದರನ್ನೂ, ಕನಕದಾಸ ಪುರಂದರ ದಾಸರನ್ನು, ವೇದಾಂತದೇಶಿಕ, ಮಣವಾಳ ಮಾಮುನಿಗಳನ್ನು ಎಲ್ಲಿ ಹುಡುಕುವ

ಇಂತಲ್ಲಿ ದಿನವೂ ಸೇವಾವಕಾಶ ಲಭ್ಯವಿರುವ ತಿ ತಿ ದೇವಸ್ಥಾನಗಳ ಉದ್ಯೋಗಿ ಸಿಬ್ಬಂದಿ ಯಿದೆ ಹನ್ನೆರಡು ವರ್ಷಕ್ಕೆ ಒಮ್ಮೆ ಬರುವ ಪುಷ್ಕರಗಳಲ್ಲಿ ತನ್ನನ್ನು ತಾನು ತೊಡಗಿಸಿಕೊಂಡ ತಿ ತಿ ದೇ ಭಕ್ತ ಜನರ ಅವಶ್ಯಕತಗಳಿಗೆ ತಕ್ಕಂತೆ ಪ್ರತಿಸ್ಪಂದಿಸುತ್ತಿದೆ ಎಂಬುದು ಕಳೆದ ನಾಲ್ಕು ಪುಷ್ಕರಗಳಿಂದ (ಗೋದಾವರಿಯವೆರಡು ಕೃಷ್ಣಾನದಿಯವೆರಡು) ಪ್ರಸಿದ್ಧವಾಗಿದೆ ಇಂತಲ್ಲಿ ಯಾತ್ರಿಕ ಸೇವೆಯಲ್ಲಿ ತೊಡಗಿಸಿಕೊಳ್ಳುವ ತತ್ತ್ವ, ಆಚರಣೆಗಳು ಮುಂದೆಯೂ ಮಾರ್ಗದರ್ಶಕವಾಗಿ ಆದರ್ಶವಾಗಲಿ ಎಂದು ಹಾರೈಸಬೇಕಾದ್ದು ಕರ್ತವ್ಯವಾಗುತ್ತದೆ

ಕೃಷ್ಣಾ ಗೋದಾವರಿಗಳ ಬಗ್ಗೆ ಆಡಿದ್ದು, ಮಾಡಿದ್ದು, ಪುಷ್ಕರಗಳಿಗೆ ಒಮ್ಮೆಯಾದರೆ, ಬ್ರಹ್ಮೋತ್ಸವಗಳು ವಾರ್ಷಿಕ ಕಾರ್ಯಕ್ರಮಗಳು ಯಾತ್ರಿಕ ಸೌಲಭ್ಯದತ್ತ, ಭಕ್ತ ಬಂಧುಗಳ ಸೇವೆ ದೈನಂದಿನವೇ ಆದರೂ -- ಇಲ್ಲಿ -- ಬ್ರಹ್ಮೋತ್ಸವಗಳಲ್ಲಿ ಹೆಚ್ಚಿನ ಶ್ರಮ, ಹೆಚ್ಚಿನ ಕಾಲ, ಹೆಚ್ಚಿನ ಸೂಕ್ಷ್ಮತೆಗಳಿಂದ ವರ್ತಿಸಬೇಕಾದ ಶಿಸ್ತಿನ ಅಗತ್ಯವುಂಟಾಗಿದ್ದು ತಿ ತಿ ದೇವಸ್ಥಾನ ಈ ಪ್ರಯತ್ನದಲ್ಲಿ ತನ್ನನ್ನು ತಾನು ತೊಡಗಿಸಿಕೊಂಡು ಕೆಲಸ ನಡೆಸಿದೆ (ಇಂತಲ್ಲಿ ತಪ್ಪುಗಳೇ ನಡೆಯುವುದಿಲ್ಲವೆಂದಲ್ಲ, ಅವು ಕ್ಷಮ್ಯವಾಗುತ್ತವೆ ಅಥವಾ ನಗಣ್ಯವಾಗುತ್ತವೆ ) ಹೀಗ ತೊಡಗಿಸಿಕೊಂಡು ವ್ಯವಸ್ಥಿತವಾಗಿ ಕೆಲಸ ಮಾಡುತ್ತಿರುವ ಈ ಒಂದು ಯಂತ್ರಾಂಗದ ಬಗ್ಗೆ ಪ್ರೋತ್ಸಾಹದ ಮಾತನಾಡುತ್ತ ಈ ಸೇವಾಧರ್ಮದ ಆದರ್ಶವನ್ನು ನಿರಂತರ ಆಚರಣೆಗೆ ತರುವ ಶಕ್ತಿ ಅವನೇ ನೀಡಬೇಕೆಂದು ಬೇಡುತ್ತದೆ ಸಪ್ತಗಿರಿ -

* * * * *



# ವೈಭವದ ವೈರಮುಡಿ

---ಬಿ ಎಸ್ ಮಣಿ

ಕರ್ನಾಟಕ ರಾಜ್ಯದಲ್ಲಿ ಮೈಸೂರು ನಗರದಿಂದ ಸುಮಾರು ಮುವತ್ತು ಮೈಲಿ ವಾಯವ್ಯ ದಿಕ್ಕಿನಲ್ಲಿರುವ 'ಜ್ಞಾನಮಂಟಪ' ಎಂದು ಹೆಸರಾಂತ ಮೇಲುಕೊಟೆ ಎಂಬ ದಿವ್ಯದೇಶವು ತಿರುನಾರಾಯಣಪುರ, ದಕ್ಷಿಣಬದರಿಕಾಶ್ರಮ, ವೇದಾದ್ರಿ, ಯಾದವಗಿರಿ, ವೈಕುಂಠವರ್ಧನ ಕ್ಷೇತ್ರ ಎಂಬ ನಾನಾ ಹೆಸರುಗಳಿಂದ ಪ್ರಸಿದ್ಧವಾದ ಪುಣ್ಯಕ್ಷೇತ್ರವಾಗಿದೆ ಇಲ್ಲಿನ ಮೂಲದೇವರು ವಿಷ್ಣು, ಅಂದರೆ ಶ್ರೀನಾರಾಯಣಸ್ವಾಮಿ ಎಂಬ ಶ್ರೇಷ್ಠನಾಮಾಂಕಿತದಿಂದ ದೇವಸ್ಥಾನದಲ್ಲಿ ಸ್ಥಾಪಿಸಲ್ಪಟ್ಟು ಭಕ್ತರನ್ನು ಎಲ್ಲೆಡೆಯಿಂದ ಆಕರ್ಷಿಸುವ ಅತ್ಯಂತ ಮನೋಹರವಾದ ವಿಗ್ರಹವಾಗಿದೆ

ಉತ್ಸವ ಮೂರ್ತಿಯೇ ಜನಪ್ರಿಯವಾದ ಚೆಲ್ವನಾರಾಯಣ ವಿಗ್ರಹ, ಹಾಗೂ ರಾಮಪ್ರಿಯ, ಯತಿರಾಜಸಂಪತ್ಕುಮಾರ, ಶೆಲ್ವಪಿಳ್ಳೈ ಎಂಬುದಾಗಿ ವಾಡಿಕೆಯಿಂದ ಕರೆಯುತ್ತಾರೆ

ದೇವಸ್ಥಾನದಲ್ಲಿ ಅನೇಕ ಉತ್ಸವಾದಿಗಳು ನಡೆಯುತ್ತಲೇ ಇರುತ್ತವೆ ರಥೋತ್ಸವ ನಡೆಯುವ ಸಂದರ್ಭದಲ್ಲಿ ಉತ್ಸವಗಳು ವಿಜೃಂಭಣೆಯಿಂದ ಜರುಗುತ್ತವೆ ಮೀನಮಾಸದಲ್ಲಿ ಒಂದು ಗೊತ್ತಾದದಿನ ಪ್ರತಿವರ್ಷ ವಜ್ರಕಿರೀಟ ಧರಿಸುವ ದಿನವೂ ಬರುತ್ತದೆ ಪ್ರತಿಯೊಂದು ತನ್ನದೇ ಸ್ವತ್ತು ಎಂಬ ಸೂಚನೆಯನ್ನು ತಿಳಿಸುವಂತೆ ಶೆಲ್ವಪಿಳ್ಳೆಗೆ ವಜ್ರಕಿರೀಟಧಾರಣೆಯಿಂದ ಉತ್ಸವವು ಕಂಗೊಳಿಸುತ್ತದೆ ಇದನ್ನೇ ತಮಿಳಿನಲ್ಲಿ ವೈರಮುಡಿ ಎನ್ನುತ್ತ ವೆ

ತನ್ನ ಪತೋಟಿಯಲ್ಲಿರುವುದೆಲ್ಲವುಗಳ ಸೃಷ್ಟಿ, ಸ್ಥಿತಿ, ರಕ್ಷಣೆ ಮತ್ತು ಲಯ ಎಲ್ಲಕ್ಕೂ ತಾನೇ ನಿಸ್ಸಂಶಯವಾಗಿ ಕಾರಣ, ಅವುಗಳಿಗೆ ಪ್ರಭು ಎಂಬುದರ ಪ್ರದರ್ಶನದ ಉದ್ದೇಶದಿಂದಲೇ ಪರಮಾತ್ಮನು ಕಿರೀಟ ಧರಿಸಿಕೊಳ್ಳುತ್ತಾನೆ ಇದು ಯಾವಬದಲಾವಣೆಗೂ ಅವಕಾಶವಿಲ್ಲದ ನಿತ್ಯವಿಭೂತಿಗೂ, ಬದಲಾವಣೆ ಶಾಶ್ವತವಾದರೂ ಯಾವುದೂ ಸ್ಥಿರವಲ್ಲದ ಲೀಲಾವಿಭೂತಿಗೂ ಅನ್ವಯಿಸುತ್ತದೆ ಈ ಎರಡೂ ವಿಭೂತಿಗಳನ್ನು ವಿಭೂತಿದ್ವಯ ಎನ್ನುತ್ತೇವೆ

ನಿತ್ಯವಿಭೂತಿಯು ಪರಮಾತ್ಮನ ಮಹತ್ವವನ್ನು ಪ್ರದರ್ಶಿಸುತ್ತದೆ ಸ್ವಗುಣವು ಸಮಂಜಸವಾಗಿ ಶಾಶ್ವತವಾಗಿರುವುದರಿಂದ ಎಲ್ಲವೂ ಅಪೇಕ್ಷಾರಹಿತವಾಗಿ ಸಂಪೂರ್ಣವಾಗಿದೆ ಚೈತನ್ಯ ಶಾಶ್ವತವಾಗಿರುವುದರಿಂದ ಕಾಲದ ಪರಿಣಾಮವು ಆ ಪರಮಪದದಲ್ಲಿನ ಚೇತನರನ್ನು ಬದಲಾಯಿಸಲು ಅಸಾಧ್ಯವಾಗಿದೆ

ನಿತ್ಯವಿಭೂತಿಗೆ ವಿರುದ್ಧವಾಗಿ ಬದಲಾವಣೆಗಳಿಂದ ಕೂಡಿದ ಲೀಲಾವಿಭೂತಿಯಲ್ಲಿ ಸತ್ವರಜಸ್ತಮಸ್ಸುಗಳ ಸಮ್ಮಿಶ್ರಣದ ಪ್ರಭಾವದಿಂದ ಇರುವುದರಿಂದ, ಲೀಲೆಯನ್ನು ಸೃಷ್ಟಿಕರ್ತನಾದ ಪರಮೇಶ್ವರನ ಸಂಕಲ್ಪವನ್ನವಲಂಬಿಸಿ, ಇದು ಮಾರ್ಪಾಡಾಗುತ್ತದೆ ಈ ಬಲವಾದ ಮಾಯಾಶಕ್ತಿಯು ತರ, ಪರಮೇಶ್ವರನ ಉಪಯೋಗಕ್ಕಾಗಿ ಬಂದು, ಪರಾತ್ಪರವಸ್ತುವನ್ನು ಚೇತನರ ದೃಷ್ಟಿ ಮತ್ತು ಮನಸ್ಸಿನಿಂದ ದೂರಮಾಡುತ್ತದೆ ಇದರಿಂದ ಯಾವುದು ನಿಜವಾಗಿ ಪರತ್ರಯೋಗಕ್ಕಾಗಿರುವುದೋ ಅದು ಸ್ವಾತಂತ್ರ್ಯಭಾವನೆ ಹೊಂದುವುದು ಆಗ ಚೇತನನು ಆನಂದ ಮತ್ತು ಜ್ಞಾನಕ್ಕೆ ಹಕ್ಕುದಾರನೆಂಬ ಆಧಾರದ ಮೇಲೆ ಪ್ರಪಂಚದ ಸೃಷ್ಟಿಯಲ್ಲಿ ಅಧಿಕಾರ ಬಯಸುತ್ತಾನೆ ಈ ಕಾರಣದಿಂದ ಸಹಜವಾಗಿ ಮಾನವನು ಚಿತ್ ಮತ್ತು ಅಚಿತ್ ವಸ್ತುಗಳನ್ನೆಲ್ಲ ತನ್ನ ಸ್ವಂತ ಉಪಯೋಗಕ್ಕೆ ಬಳಸಲು ಯೋಗ್ಯವೆಂದು ಅಭಿಪ್ರಾಯಪಡುವನು ಮಾಯೆ ಸಂಬಂಧದಿಂದ ಉಂಟಾಗುವ ಈ ಪರಿಣಾಮವು ಬಹಳ ಮುಖ್ಯವೂ ದುರದೃಷ್ಟಕರವೂ ಆದ ಎರಡು ವಿಷಯಗಳನ್ನು ಸೂಚಿಸುತ್ತದೆ ಅದೇ ಅಹಂಕಾರ ಮತ್ತು ಮಮಕಾರ - ನಾನು ಮತ್ತು ನನ್ನದು ಎಂಬ ಭಾವನೆಗಳನ್ನು ತರುತ್ತದೆ ನಾನು ಮತ್ತು ನನ್ನದು ಎಂದರೂ ಆ ಭಗವಂತನ ಏಕಾಧಿಕಾರವಾಗಿ, ಕಿರೀಟಧಾರಣೆಯು ಅದಕ್ಕೆ ಸಾಕ್ಷಿಯಾಗಿದೆ

ಆಶಾಭಂಗಗಳನ್ನು ಸಹಿಸಲಾರದೆ, ನ್ಯೂನತೆಗಳಿಂದ ಕೂಡಿ ಕಂಗಾಲಾದ ಜನಗಳ ಅಶಕ್ತತೆಗಳಿಗೆ ಕಟ್ಟುಬಿದ್ದು, ಭಗವಂತನು ನಿರ್ಮಿಸಿರುವ ಈ ನಾರ ಪ್ರಪಂಚವು ಈಶ್ವರ ವಾದಿತ್ವದ ಸಿದ್ಧಾಂತ ಮಾತ್ರವೇ ಅಲ್ಲ, ಪ್ರಪಂಚದ ಪರಿಪೂರ್ಣತ್ವದ ಸ್ಥಿತಿಯಲ್ಲಿ ವಿಭುವು ತನ್ನ ಸೃಷ್ಟಿಯ ಅವಶ್ಯಕತೆಗಳೆಲ್ಲವನ್ನೂ ಪೂರೈಸುವುದಲ್ಲದೆ ತನ್ನ ಆಟದ ಬಯಕೆಯಿಂದ ತೃಪ್ತಿಹೊಂದಲು ಜೀವಜಂತುಗಳನ್ನು ಬಳಸುತ್ತಾನೆ ಆ ಪರಬ್ರಹ್ಮನು ಏಕಮೇವ ಅದ್ವಿತೀಯನಾಗಿ, ಈ ಪ್ರಪಂಚವೆಲ್ಲವೂ ಅವನ ಆಸೆಯನ್ನು ನೀಗಿಸುವುದಲ್ಲದೆ ತನ್ನದೇ ಆದ ನಿಲುವಿನಿಂದ ಪರಿಪೂರ್ಣತೆಹೊಂದಿ ದೋಷರಹಿತವಾಗಿ ಮುಂದುವರಿಯಲು ಯಾವ ಅವಶ್ಯಕತೆಯೂ ಇಲ್ಲವಾಗಿದೆ

ಆದ್ದರಿಂದ ಈ ಜಗತ್ತಿನ ಉದಯವು ಆ ಸೃಷ್ಟಿಕರ್ತನ ದಯಾಪೂರ್ವಕವಾಗಿದೆ ಮತ್ತು ಪರಮಾತ್ಮನ ಸಮೃದ್ಧಿ ಪೂರ್ವಕವೂ ಆಗಿದೆ

ಪರತಂತ್ರರಾದ ಚೇತನರು ಭಗವಂತನೊಡನೆ ಸಾಮ್ಯ ಭಾವಿಸಿಕೊಂಡು ಪ್ರಪಂಚದ ಅಸ್ತಿತ್ವದಿಂದ ಪ್ರತ್ಯೇಕವಾಗಿ ಅಸಹಾಯಕತ್ವದ ಸ್ವಾತಂತ್ರ್ಯದಿಂದ ಕೂಡಿ, ಬದಿಗೊತ್ತಲ್ಪಟ್ಟವರಾಗುವರು ಎಷ್ಟು ತೊಳಲಾಡುವರು ಪರಮಾತ್ಮನ ಸಹಾಯವಿಲ್ಲದ ಬಿಡುಗಡೆಹೊಂದಲಾರದವರಾಗಿ, ಪರಮೇಶ್ವರನ ಸಹಾಯದಿಂದಲೇ ತನ್ನ ಅರಿವಿನಿಂದ ಪರಿಪೂರ್ಣತೆಯ ಚೇತನರಾಗಿ ಪ್ರಕೃತಿಯಿಂದ ಯಾವತೊಂದರೆಯೂ ಇಲ್ಲದ ಮುಕ್ತಿಭೂಮಿಯ ಸುಖಹೊಂದಲು ಆ ವಿಭುವನ್ನೇ ಸಮೀಪಿಸುತ್ತಾನೆ ಈ ಮನೋಭಾವನೆಯಿಂದ ಇರುವವರಿಗೆ ಪರವ್ಯೂಹ ವೇದಾಂತವಾಗಿ ಕಂಡುಬರುತ್ತದೆ

ವೇದಾಂತವು ಅತಿ ಮಹತ್ವದ್ದೂ, ಉಪಯುಕ್ತವೂ ಆಗಿ, ಮನುಷ್ಯನು ಎಂದು ಪ್ರಬಲವಾದ ಶಕ್ತಿಯ ಸಹಾಯದಿಂದ ಸಾಧಿಸಬಹುದಾದ ಕೊನೆಯ ಆಸೆಯ ಯೋಜನಾಕ್ರಮವಾಗಿದೆ ಪರಬ್ರಹ್ಮತತ್ವ--ವೇದಾಂತತತ್ವ ಇವೆರಡರಲ್ಲಿ ಮೊದಲನೆಯದು ಎಲ್ಲಾ ನಿಲುವಿನಲ್ಲೂ ಪರಮಾತ್ಮನ ಆಶ್ರಯ ಹೊಂದಿ ಶಾಶ್ವತ ಶರೀರಾತ್ಮಭಾವನೆಯ ಅಪೃಥಕ್‌ಸಿದ್ಧಿ ಸಿದ್ಧಾಂತವಾಗಿದೆ

ಒಂದೇ ಒಂದು ವಸ್ತುವಿನ ಅಸ್ತಿತ್ವಕ್ಕೆ ವಜ್ರಕಿರೀಟವು ಸೂಚನೆಯಾಗಿದೆ ಯಾವ ಸಂದರ್ಭದಲ್ಲೂ, ಯಾವ ವಸ್ತುವಿಗೂ ಆ ಮಹತ್ವಪೂರಿತ ಪರಮೇಶ್ವರನೊಂದಿಗೆ ಸಾಮ್ಯತೆಯ ಅಧಿಕಾರಕ್ಕೆ ಅವಕಾಶವೇ ಇಲ್ಲ ಆದ್ದರಿಂದ ಅತ್ಯುನ್ನತ ಆ ಅಸ್ತಿತ್ವವನ್ನು ಮಾತ್ರ 'ಅಹಂ' ಎಂಬ ಅಧಿಕಾರವಾಣಿಯಿಂದ ತಿಳಿಯಬಹುದು ಪರಮಾತ್ಮನಿಗೆ ಅಧೀನವಾದ ಚೇತನವರ್ಗವು ಜ್ಞಾನಯುಕ್ತ ವಸ್ತುವಾದುದರಿಂದ ಅಹಂ - ಎಂಬ ಶಬ್ದಕ್ಕೆ ಅರ್ಹತೆ ಇದೆ ಎಂದು ಭಾವಿಸಿದರ ಅನ್ವರ ಸೂತ್ರಿಗೆ ಒಡೆಯನಾದಂತಾಗುತ್ತದೆ ಚೇತನನು ಒಡೆಯನ ಸ್ವಾಧೀನದಲ್ಲಿರುವ ಸೊತ್ತು ಎಂಬ ಅರಿವು ಮನುಷ್ಯನನ್ನು ಪರಮಪದದ ನೆಳಗೆ

ಒಯ್ಯುತ್ತದೆ ಈ ನಾರ ಪ್ರಪಂಚವೆಲ್ಲವೂ ಪರಮಾತ್ಮನ ಸೊತ್ತು ಎಂಬ ತಿಳಿವಳಿಕೆ ಚೇತನನಿಗೆ ಸಹಜವಾದುದು ಆದರೆ ಈ ತಿಳಿವಳಿಕೆ ಚೇತನನ ಸ್ವಾತಂತ್ರ್ಯಭಾವನೆಯನ್ನು ಕಳಚಿಬಿಡುವುದಾದರೂ ಹೆಮ್ಮೆಯಿಂದ ಕೂಡಿದ ಸ್ಥಿರವಾದ ಪರಮಾತ್ಮನೊಂದಿಗೆ ಅಡಿಯೇರ್ ಸ್ಥಿತಿಯನ್ನು ತಾನೇ ಅಬದ್ರಪಡಿಸಿಕೊಳ್ಳಬಾರದು ಅಚೇತನದ ಉಪಯೋಗವನ್ನು ಚೇತನನ ಮೂಲಕ ಪರಮಾತ್ಮನೇ ಸಾದಿಸಿಕೊಳ್ಳುತ್ತಾನೆ, ಎಂಬ ಅಮೋದವಾದ ತಿಳಿವಳಿಕೆ ಅಗತ್ಯ

ಈ ಪ್ರಪಂಚದ ಸೃಷ್ಟಿಯಲ್ಲಿ ಸಹಜವಾದ ಈ ಶೇಷಿತ್ವದ ಸಂಬಂಧವನ್ನು ನೆನಪಿನಲ್ಲಿಡುವುದೇ ಮುಖ್ಯ ವಿವೇಕವಾಗಿದೆ ಹಾಗೂ ಜೀವಾತ್ಮನು ಪರಮಾತ್ಮನ ಪೂರ್ಣವಿನಿಯೋಗಕ್ಕಾಗಿ, ಅವನೊಂದಿಗೆ ಸಂಬಂದವು ಸಹಜವೂ ಶಾಶ್ವತವೂ ಆಗಿದೆ ಈ ಸಂಬಂದ ಲೋಪದಿಂದ ಅಹಿತವಾದ ಇಬ್ಬಗೆಯ ಅಬಿಪ್ರಾಯಗಳು ಬರುತ್ತವೆ ಒಂದು ಚೇತನನು ಪ್ರಕೃತಿಗೆ ಒಡೆಯನೆಂದೂ, ಮತ್ತೊಂದು ಚೇತನಾಚೇತನ ಪ್ರಪಂಚವೆಲ್ಲಾ ಚೇತನನ ಉದ್ದೇಶಕ್ಕೆ ಮಾತ್ರ ಉಪಯೋಗವಾಗಬೇಕೆಂಬುದು ಈ ಎರಡೂ ಅಬಿಪ್ರಾಯಗಳು ಚೇತನನಲ್ಲಿ ಅಹಂ ಮತ್ತು ಮಮ--ಗಳನ್ನು ಉಂಟಾಗಿಸುತ್ತವೆ ಇವೆರಡೂ ಚೇತನನಲ್ಲಿ ಉಳಿದುಕೊಂಡಿರುವವರೆಗೆ ದು ಖ, ನಿರಾಶೆ, ಜಿಗುಪ್ಸೆ ಇತ್ಯಾದಿಗಳು ಹೋಗಲಾರವು ಈ ವಿಷಯವನ್ನು ಸ್ಪಷ್ಟವಾಗಿ ಒತ್ತಿಹೇಳಲು ವೈರಮುಡಿ ಉತ್ಸವವನ್ನು ವರ್ಷಕ್ಕೊಮ್ಮೆ ಸೂರ್ಯಾಸ್ತಾನಂತರ ಮತ್ತು ಸೂರ್ಯೋದಯಕ್ಕೆ ಮುಂಚೆ ನಡೆಯಿಸುತ್ತಾರೆ ಹಿಂದೂ ಪಂಚಾಂಗದ ಪ್ರಕಾರ ಮಾನವನಿಗೆ ಒಂದು ವರ್ಷದ ಅವದಿಯು, ವೇದದಲ್ಲಿ ತಿಳಿಸಿರುವಂತೆ ದೇವತೆಗಳಿಗೆ ಒಂದು ದಿನದ ಕಾಲಾವದಿಯಾಗಿದೆ ಇದರ ಪ್ರಕಾರ ವೈರಮುಡಿ ಉತ್ಸವವು ದೇವತೆಗಳಿಗೆ ಪ್ರತಿದಿನ ನಡೆಯುವ ಉತ್ಸವ

ವಜ್ರಕಿರೀಟವನ್ನು ಪಾಲ್ಗುಣ ಶುಕ್ಲಪಕ್ಷ ದಶಮಿ ಪುಷ್ಯನಕ್ಷತ್ರದಂದು ಮಾತ್ರ ದೇವರು ಶಿರಸ್ಸಿನಲ್ಲಿ ದರಿಸಿರುವುದನ್ನು ಕಾಣಬಹುದು ರಾತ್ರಿಯಲ್ಲಿ ಪ್ರಕಾಶಮಾನವಾದ ವಸ್ತು ಅತ್ಯಂತ ಆಕರ್ಷಣೀಯವಾಗಿ ಜ್ವಲಿಸುತ್ತದೆ ವೈರಮುಡಿ ದಾರಣೆಯಿಂದ ಉತ್ಸವಮೂರ್ತಿ ಸ್ವಾಭಾವಿಕವಾಗಿಯೇ ಅತ್ಯಂತ ಪ್ರಥೆಯಿಂದ ಕೂಡಿ, ವಾಗೂ ವಸ್ತ್ರಾದಿಬೂಷಣಗಳಿಂದ ಕಾಂತಿಯುಕ್ತವಾಗಿ ಕಣ್ಣುಗಳನ್ನು ಸೂರೆಗೊಳ್ಳುವ ವೈಭವದ ಉತ್ಸವವಾಗಿದೆ

ವೈರಮುಡಿ ಸಾಧಾರಣವಾದ ಕಿರೀಟವಲ್ಲ ಬಗವಂತನಿಗೆ ದಿವ್ಯಾಭರಣ ಭೂಷಿತವಾದುದು ಇಲ್ಲಿ ನಾವು ಅಬ್ಯುದಕ್‌ಸಿದ್ಧಿ ಸಂಬಂದವನ್ನು ಕಾಣಬಹುದು ಬಗವಂತನ ವಿಶೇಷಣಗಳನ್ನು ಅವನಿಂದ ಬೇರೆಮಾಡಿ ಯಾರೂ ನೋಡಲಾಗುವುದಿಲ್ಲ ಆದ್ದರಿಂದ ವೈರಮುಡಿಯನ್ನು ಉತ್ಸವಮೂರ್ತಿ ದರಿಸಿರುವಾಗ ಮಾತ್ರ ದರ್ಶನಮಾಡಬಹುದು ಮಕುಟ ದಾರಣೆ ಮಾಡುವ ಅರ್ಚಕರ ವೃಂದದವರು ಈ ಕೈಂಕರ್ಯವನ್ನು ಕತ್ತಲಲ್ಲಿಯೇ ನಡೆಸುತ್ತಾರೆ ಚೇತನನಿಗೆ ಶಿಲ್ಪಪಿಳ್ಳೆಯೊಂದಿಗೆ ಮುಡಿ ದರ್ಶನಮಾಡುವ ಅವಕಾಶ ಆ ಒಂದು ದಿನಮಾತ್ರವಿರುವುದರಿಂದ, ಈ ಉತ್ಸವವು ಅತ್ಯಂತ ಮಹತ್ವಯುಕ್ತವಾಗಿದೆ

ನಾರ ಪ್ರಪಂಚದ ವಸ್ತುಗಳಿಗೆಲ್ಲಾ ಪರಮಾತ್ಮನೇ ಒಡೆಯ ಉಳಿದೆಲ್ಲ ಅವನ ಅದೀನ ವಾಗೂ ಪ್ರಪಂಚದ ನಿಯಂತ್ರಣಕ್ಕೆ ಅವನೇ ಕಾರಣನಾಗಿರುವನೆಂಬುದು ಸ್ಪಷ್ಟವಾದ ವಿಚಾರ ಈ ಸಿದ್ಧಾಂತವನ್ನು 'ಯಸ್ಯ ಆತ್ಮ ಶರೀರಂ, ಯಸ್ಯ ಪೃದವೀ ಶರೀರಂ' ಎಂದು ವೇದಾಂತದಲ್ಲಿ ಶರೀರಾತ್ಮಬಾವವಾಗಿ ಹೇಳಿದೆ ಅಂದರೆ ಚೇತನಾಚೇತನ ಪ್ರಪಂಚ ಆ ಪರಮಾತ್ಮನಿಗೆ ಶರೀರವಾಗಿದೆ ವೈರಮುಡಿ ಉತ್ಸವವು ಈ ಸಿದ್ಧಾಂತವನ್ನು ನೆನಪಿಗೆ ತರುವುದಲ್ಲದೆ, ಪರಮಾತ್ಮನೊಂದಿಗೆ ಶರೀರಾತ್ಮ ಸಂಬಂದವನ್ನು ವರ್ಷಕ್ಕೊಮ್ಮೆ ಉತ್ಸವ ಪ್ರದರ್ಶನದಿಂದ ಮುಖ್ಯ ಉಪದೇಶವಾಗಿ ಚೇತನನ ಉಜ್ಜೀವನಕ್ಕೆ ದಾರಿಯಾಗಿದೆ

ವಜ್ರಕಿರೀಟದಾರಿಯಾದ ಚೆಲುವರಾಯ ಸ್ವಾಮಿಯು ಗರುಡಾರೂಢನಾಗಿ ಶ್ರೀದೇವಿ ಬೂದೇವಿಯರೊಂದಿಗೆ ಬಿಜಯಮಾಡುತ್ತಾನೆ ಉತ್ಸವದ ಮುಂದೆ ದಿವ್ಯಪ್ರಬಂದದ ಪರತ್ವಪ್ರಕಾಶಕವಾದ ಭಾಗ 'ನಾನ್ಮುಹನ್ ತಿರುವಂದಾದಿ' ಯನ್ನು ಶ್ರೀ ವೈಷ್ಣವ ಗೋಷ್ಠಿಯವರು ಸೇವೆಮಾಡುತ್ತಾರೆ ಉತ್ಸವದ ಹಿಂಬಾಗದಲ್ಲಿ ಸಂಸ್ಕೃತ ವೇದ ಪಾರಾಯಣ ನಡೆಯುತ್ತಿರುತ್ತದೆ ಉತ್ಸವವನ್ನು ನಿದಾನವಾಗಿಯೂ, ತೀವ್ರಗತಿಯಿಂದಲೂ, ಹಿಂದೆ ಮುಂದೆ, ಅಕ್ಕಪಕ್ಕಗಳಿಗೆ ತಿರುಗಿಸಿ ಬಕ್ತವೃಂದದವರಿಗೆಲ್ಲಾ ದರ್ಶನವಾಗುವಂತೆ ಬಿಜಯಮಾಡಿಸುತ್ತಾರೆ

ಮೇಲುಕೋಟೆ ಉತ್ಸವಮೂರ್ತಿ ಸಂಪತ್ಕುಮಾರ ದೇವರಿಗೆ ಈ ಸ್ವರ್ಗೀಯ ವಜ್ರಕಿರೀಟ ದರಿಸಿಕೊಳ್ಳುವ ಸಂದರ್ಬ ಉಂಟಾದುದು ಕುತೂಹಲಕಾರಿಯಾಗಿದೆ ಈ ವಿಷಯವನ್ನು ಯಾದವಗಿರಿಯ ಮಹಿಮೆಯನ್ನು ತಿಳಿಸುವ ಗ್ರಂದಗಳಿಂದ ಸಂಗ್ರಹಿಸಬಹುದು

ಮೊದಲಾಗಿ ಈ ವಜ್ರಕಿರೀಟವು ಪಾಲ್ಗಡಲಲ್ಲಿ ಶೇಷಶಯನನಾದ ಮಹಾವಿಷ್ಣುವಿನ ಶಿರಸ್ಸಿನಲ್ಲಿದ್ದಿತು ದೈವಾಂಶಪುರುಷರು, ಅಮಾನುಷ ಶಕ್ತಿಯಿಂದ ಪರಮಾತ್ಮನನ್ನು ಕಾಣುವ ಸಂದರ್ಬವೊದಗಿತು ಅದೇ ತೊಂದರೆಗೆ ಮೂಲವಾಗಿ ಕಿರೀಟವು ಕಳುವಾಗಿ ಅದನ್ನು ಪುನ ಹೊಂದಿ ಸಂಪತ್ಕುಮಾರನ ಶಿರಸ್ಸಿನಲ್ಲಿ, ವಿಷ್ಣುವಿಗೆ ಆದಿಶೇಷನೆಂದು ಪರಿಗಣಿಸಲಾದ ಶ್ರೀರಾಮಾನುಜರ ಸಮ್ಮುಖದಲ್ಲಿ ಇಡಲಾಯಿತು

ಭಕ್ತ ಶ್ರೇಷ್ಠನಾದ ಪ್ರಹ್ಲಾದನು ಶೇಷಶಾಯಿಯಾದ ಮಹಾ ವಿಷ್ಣುವನ್ನು ಕಾದುಕೊಂಡಿರುವಾಗ, ಅವನ ಮಗ ವಿರೋಚನನು ತಂದೆಯ ಸಮೀಪದಲ್ಲಿರುತ್ತಿದ್ದನು ಒಮ್ಮೆ ವಿರೋಚನನು, ಆ ವಜ್ರಕಿರೀಟದಾರಣೆಯಿಂದ ತಾನು ಹೇಗೆ ಕಾಣಬಹುದೆಂಬ ಆಸೆಯಿಂದ ಅದನ್ನು ದರಿಸುವ ಅಬಿಲಾಷೆಪಟ್ಟನು ಬಕ್ತರೆಲ್ಲಾ ಪರಮಾತ್ಮನ ಸೇವೆಯಲ್ಲಿ ನಿರತರಾಗಿರುವಾಗ, ವಿರೋಚನನು, ಯಾರದೃಷ್ಟಿಗೂ ಬೀಳುವುದಿಲ್ಲ ಎಂಬ ಅಬಿಪ್ರಾಯದಿಂದ, ವಿಷ್ಣುವಿನ ಕಿರೀಟವನ್ನು ತೆಗೆದು, ಬಟ್ಟೆಯಲ್ಲಿ ಬಚ್ಚಿಟ್ಟುಕೊಂಡು ವೇಗವಾಗಿ ಓಡಿ ಪಾತಾಳಲೋಕ ಸೇರಿದನು

ಕೆಲವೇ ನಿಮಿಷಗಳ ನಂತರ ಕಿರೀಟವು ಇಲ್ಲದುದನ್ನು ಕಂಡು, ವಿಚಾರಿಸಲಾಗಿ, ವಿರೋಚನನು ಅಲ್ಲಿ ಇಲ್ಲದ್ದನ್ನು ಗಮನಿಸಿ, ಪ್ರಹ್ಲಾದನು ಅವನೇ ಅಪರಾದಿ ಇರಬಹುದೆಂದು ಹೇಳಿದನು ತಕ್ಷಣವೇ ವಿಷ್ಣುವಿನ ವಾಹನವಾದ ಗರುಡನು, ಕಿರೀಟದೊಂದಿಗೆ ಹೋಗಿದ್ದ ಅಪರಾದಿಯನ್ನು ಹುಡುಕಲು ಹೊರಟನು ಬಹಳ ದಿನಗಳನಂತರ ತಪ್ಪಿತಸ್ಥನನ್ನು ಕಂಡು, ಅವನೊಡನೆ ಹೋರಾಡಿ, ವಿರೋಚನನನ್ನು ಕೊಂದು ಕಿರೀಟವನ್ನು ತೆಗೆದುಕೊಂಡು ಕ್ಷೀರಸಾಗರದಕಡೆಗೆ ವಿಷ್ಣುವಿಗೆ ಸಮರ್ಪಿಸಲು ಹೊರಟನು

ಪರಮಾತ್ಮನೊಂದಿಗೆ ಸಾಮ್ಯತೆ ಅಪೇಕ್ಷಿಸಿದ ಚೇತನವರ್ಗದ ವಿರೋಚನನಿಗೆ ಅಳಿವುಂಟಾಯಿಂತೆಂಬುದನ್ನು ಗಮನಿಸಬೇಕು

ಗುರುತ್ಮಂತನು ಕ್ಷೀರಾಬ್ಧಿಯಕಡೆ ಪ್ರಯಾಣ ಬೆಳೆಸುವ ಸಮಯದಲ್ಲಿ ದ್ವಾಪರಯುಗ ಪ್ರಾರಂಬವಾಗಿ ಕೃಷ್ಣನ ಅವತಾರವಾಗಿದ್ದಿತು

ರಾಮ ಕೃಷ್ಣ ಇಬ್ಬರೂ ವಿಷ್ಣುವಿನ ಅವತಾರ ಪುರುಷರಾಗಿ ಮಾನವವರ್ಗದೊಂದಿಗೆ ಇದ್ದು, ತಮ್ಮ ಅತಿಮಾನುಷ ಕೃತ್ಯಗಳಿಂದ ದೈವಿಕ ಶ್ರೇಷ್ಠತ್ವವನ್ನು ಹಲವಾರು ಸಂದರ್ಭಗಳಲ್ಲಿ ವ್ಯಕ್ತಪ

ಡಿಸಿರುತ್ತಾರೆ ತಂದೆ ದಶರಥಮಹಾರಾಜನು ಹಿರಿಯ ಮಗ ಶ್ರೀರಾಮನಿಗೆ ಪಟ್ಟಾಭಿಷೇಕ ಮಾಡಿ ತಾನು ರಾಜಪದವಿಯಿಂದ ವಿರಾಮ ತಗೆದುಕೊಳ್ಳುವುದಾಗಿ ಹೇಳಿದುದು ನಡೆಯಲೇ ಇಲ್ಲ ಆದರೆ ಹದಿನಾಲ್ಕು ವರ್ಷಗಳನಂತರ ರಾಮನು ದಶರಥನ ಉತ್ತರಾಧಿಕಾರಿಯಾಗಿ ಪಟ್ಟಾಭಿಷಿಕ್ತನಾಗಿ ವೈಭವದಿಂದ ರಾಜ್ಯವಾಳುತ್ತಿರುವಾಗ ದೇವರನ್ನು ಪೂಜಿಸುವ ನಿಯಮಾವಳಿಗಳನ್ನು ಪಾಲಿಸುತ್ತಿದ್ದನು ಸೂರ್ಯವಂಶಕ್ಕೆ ಶ್ರೀ ರಂಗನಾಥಸ್ವಾಮಿಯ ವಿಗ್ರಹಾರಾಧನೆ ಮೊದಲಿನಿಂದ ಬಂದ ಪದ್ಧತಿಯಾಗಿದ್ದಿತು ಆ ವಿಗ್ರಹವನ್ನು ಪಟ್ಟಾಭಿಷೇಕ ಸಂದರ್ಭದಲ್ಲಿ ವಿಭೀಷಣನಿಗೆ ಕೊಡುಗೆಯಾಗಿ ಕೊಟ್ಟಿದ್ದನು ಮುಂದೆ ಶ್ರೀರಾಮನಿಗೆ ಪೂಜೆಗೆ ವಿಗ್ರಹವಿಲ್ಲದಿರಲು ಪೂಜಾನಿಯಮಗಳನ್ನು ನಿರ್ವಹಿಸಲು ಅಸಾಧ್ಯವಾಯಿತು ಆ ಸಮಯಕ್ಕೆ ಸರಿಯಾಗಿ ಸಪ್ತಋಷಿಗಳಲ್ಲೊಬ್ಬರು ಶ್ರೀರಾಮನಿಗೆ ತಮ್ಮಲ್ಲಿದ್ದ ದೇವರ ವಿಗ್ರಹವನ್ನು ಪೂಜಿಸಲು ಕೊಟ್ಟರು ಆ ವಿಗ್ರಹವೇ 'ರಾಮಪ್ರಿಯ' ಎಂಬ ಹೆಸರಿನಿಂದ ಶ್ರೀರಾಮನಿಗೆ ಪ್ರಿಯವಾಗಿ ಆತನಿಂದ ಪೂಜಿಸಲ್ಪಟ್ಟು ಈಗ ಮೇಲುಕೋಟೆಯಲ್ಲಿ ಉತ್ಸವಮೂರ್ತಿಯಾಗಿ ಸಂಪತ್ಕುಮಾರ ಎಂದು ಕರೆಯಲ್ಪಡುವ ದಿವ್ಯ ವಿಗ್ರಹವಾಗಿದೆ

ಶ್ರೀರಾಮನ ವಂಶದಲ್ಲಿ ಕನಕಮಾಲಿನಿ ಎಂಬ ಕನ್ಯೆ ಇದ್ದಳು ಇವಳಿಗೆ ಕೃಷ್ಣನ ವಂಶವಾದ ಯಾದವಕುಲದ ಒಬ್ಬ ರಾಜಕುಮಾರನೊಂದಿಗೆ ವಿವಾಹವಾಯಿತು ಆಗ ರಾಮಪ್ರಿಯ ವಿಗ್ರಹವನ್ನು ಸೂರ್ಯವಂಶದಿಂದ ಯಾದವವಂಶಕ್ಕೆ ವರ್ಗಾಯಿಸಲಾಗಿ, ಈ ಮೂರ್ತಿಯನ್ನು ಕೃಷ್ಣನ ಸಹೋದರ ಬಲರಾಮನು ಪೂಜೆಮಾಡುತ್ತಿದ್ದನು

ಗರುಡನು ಕಿರೀಟದೊಂದಿಗೆ ಕ್ಷೀರಾಬ್ಧಿಕಡೆಗೆ ಹೋಗುತ್ತಿದ್ದಾಗ ದಾರಿಯಲ್ಲಿ ಕಾಂಚೀಪುರದ ಹತ್ತಿರ ಒಂದು ಕೊಳದೊಳಕ್ಕೆ ವೈರಮುಡಿಯ ಮೇಲಿದ್ದ ತುರಾಯಿ ಕಳಚಿಬಿದ್ದಿತು ಕೊಳದಿಂದ ಅದನ್ನು ತೆಗೆಯಲು ಗರುಡನು ಪಟ್ಟಶ್ರಮವು ಸಾರ್ಥಕವಾಗಲಿಲ್ಲ ದೇರೆಯವರ ಅದೀನಕ್ಕೆ ಆ ತುರಾಯಿ ಹೋಗದಿರಲು, ತಾನೇ ಆ ಕೊಳವನ್ನು ಕಾಯ್ದುಕೊಂಡಿದ್ದನು ಈಗಲೂ ಕಂಚಿಯ ಹತ್ತಿರ 'ತಿರುಪುಳ್‌ಕುಳಿ' ಎಂಬ ಹೆಸರಿನ ಕೊಳವಿದೆ ಆ ಕೊಳವು ದೈವೀಪಕ್ಷಿಯಾದ ತಿರುಪುಳ್ ಕಾವಲಿನಿಂದ ಕೂಡಿದೆ

ವೈನತೇಯನು ಕಿರೀಟದೊಂದಿಗೆ ಮುಂದೆ ಹಾರಿ ಹೋಗುತ್ತಿರುವಾಗ ಶ್ರೀಕೃಷ್ಣನ ಸಾನ್ನಿಧ್ಯವು ಪಕ್ಷಿಯ ವೇಗವನ್ನು ತಡೆಯಿತು ಆಗ ಕಿರೀಟವನ್ನು ಶ್ರೀಕೃಷ್ಣನ ವಶಕ್ಕೆ ಕೊಡಲಾಯಿತು ಈ ಕಿರೀಟವನ್ನು ತಾವು ಪೂಜಿಸುತ್ತಿದ್ದ ರಾಮಪ್ರಿಯನ ಶಿರಸ್ಸಿನಲ್ಲಿ ಇಟ್ಟಾಗ ಅದು ಸರಿಯಾಗಿ ಹೊಂದಾಣಿಕೆಯಾದುದು ಅತಿಶಯದ ವಿಷಯವಾಗಿದ್ದಿತು

ಬಲರಾಮನು ಪುಣ್ಯಸ್ಥಳಗಳ ಪ್ರವಾಸದಿಂದ ಹಿಂದಿರುಗಿಬಂದು, ರಾಮಪ್ರಿಯ ವಿಗ್ರಹವು ಮೇಲುಕೋಟೆಯಲ್ಲಿರುವ ಶ್ರೀ ತಿರುನಾರಾಯಣ ಮೂಲವಿಗ್ರಹವನ್ನು ಹೋಲುವುದರಿಂದಲೂ, ಈ ಕಾರಣದಿಂದ ಇಂತಹ ಉತ್ಸವಮೂರ್ತಿ ಮತ್ತು ಮೂಲವಿಗ್ರಹಗಳೆರಡೂ ಒಂದೆ ಸ್ಥಳದಲ್ಲಿ ಇರಬೇಕೆಂದು ತಿಳಿಸಲು, ಈ ಸಲಹೆಗೆ ಕೃಷ್ಣನು ಒಪ್ಪಿಕೊಂಡು, ಅಣ್ಣ ತಮ್ಮಂದಿರಿಬ್ಬರೂ ಕಿರೀಟದಿಂದ ಕೂಡಿದ ರಾಮಪ್ರಿಯ ವಿಗ್ರಹದೊಂದಿಗೆ ಮೇಲುಕೋಟೆಗೆ ಬಂದು ಉತ್ಸವಮೂರ್ತಿಯನ್ನು ಸಮರ್ಪಿಸಿದರು ಇದರಿಂದಾಗಿ ಮೇಲುಕೋಟೆಗೆ 'ಯಾದವಾದ್ರಿ' ಎಂಬ ಹೆಸರು, ಯಾದವಕುಲತಿಲಕರಾದ ಶ್ರೀ ಕೃಷ್ಣನ ಭೇಟಿಯಿಂದ ಉಂಟಾಯಿತು

ಉತ್ಸವಮೂರ್ತಿಯು ಮುಂದೆ ಬಹುದೂರ ಉತ್ತರದಿಕ್ಕಿಗೆ ಒಯ್ಯಲ್ಪಟ್ಟು, ಅನಂತರ ವಿಗ್ರಹವನ್ನು ಹಿಂದಕ್ಕೆ ತರುವುದು ಶ್ರೀ ರಾಮಾನುಜರ ಪಾಲಿಗೆ ಬಂದು, ಪುನ ಮೇಲುಕೋಟೆಯ ದೇವಸ್ಥಾನದಲ್ಲಿ ಇಡಲಾಯಿತು ಆಗ ಯತಿರಾಜರು ಸಂಪತ್ಕುಮಾರ ಎಂದು ಸಂಬೋಧಿಸಿದರು ಉತ್ಸವಮೂರ್ತಿ ರಾಮಾನುಜರ ಶೆಲ್ಲಪಿಳ್ಳೆ, ಅವರು ವಾತ್ಸಲ್ಯಾತಿಶಯದಿಂದ ಕೂಡಿದ ತಂದೆ ಮೇಲುಕೋಟೆ ದಿವ್ಯಕ್ಷೇತ್ರವಾಗಿ ಧನ್ಯವಾಯಿತು ಪುತ್ರನಿಗೆ ನಡಸಬೇಕಾದ ಉತ್ಸವಾದಿಗಳನ್ನು ಏರ್ಪಡಿಸುತ್ತಾರೆ

ಕಲ್ಯಾಣೋತ್ಸವ, ಮರುದಿನ ಧ್ವಜಾರೋಹಣ, ಮಾನವಸ್ತ ನಕ್ಷತ್ರದಂದು ಬ್ರಹ್ಮೋತ್ಸವ, ಕಲ್ಯಾಣವಾದ ನಾಲ್ಕನೇದಿನ ನಾಗವಲ್ಲಿ ಉತ್ಸವ, ಮರುದಿನ ಫಾಲ್ಗುಣಶುಕ್ಲಪಕ್ಷ ಪುಷ್ಯನಕ್ಷತ್ರದಂದು, ಶ್ರೀರಾಮನಿಗೆ ಪಟ್ಟಾಭಿಷೇಕ ತಪ್ಪಿಹೋದ ಕೊರತೆಯನ್ನು ನೀಗುವಂತೆ, ತಂದೆಯ ಸ್ಥಾನದಲ್ಲಿ ಶ್ರೀರಾಮಾನುಜರ ಸಮ್ಮುಖದಲ್ಲಿ ವೈರಮುಡಿ ಉತ್ಸವ ನಡೆಸಲ್ಪಟ್ಟು, ಇಂದಿಗೂ ಪ್ರತಿವರ್ಷ ಇದೇದಿನ ವೈಭವದಿಂದ ಉತ್ಸವವು ನಡೆಯುತ್ತದೆ

ವೈರಮುಡಿ ಉತ್ಸವವು ಕಣ್ಮನಗಳನ್ನು ತಣಿಸುವುದಲ್ಲದೆ ಚೇತನವರ್ಗಕ್ಕೆ ಅತ್ಯಮೂಲ್ಯವಾದ ತತ್ತ್ವಾಂಶಗಳನ್ನು ಸೂಚಿಸುತ್ತದೆ

1 ವಜ್ರಕಿರೀಟವು ಸ್ವರ್ಗೀಯ, ಏಕೆಂದರೆ ಇದು ಮೊದಲು ಶ್ರೀಮನ್ನಾರಾಯಣನು ಧರಿಸಿದ್ದ ಕಿರೀಟ

2 ಉತ್ಸವ ಮೂರ್ತಿಯು ಶ್ರೀ ರಾಮ ಮತ್ತು ಬಲರಾಮಾದಿಗಳಿಂದ ಪೂಜಿಸಲ್ಪಟ್ಟ ಪವಿತ್ರ ವಿಗ್ರಹವಾಗಿದೆ

3 ರಾಮಪ್ರಿಯನ ಶಿರಸ್ಸಿನಲ್ಲಿ ಕಿರೀಟವಾರಣೆಯಾಗಿ, ಅನಂತರ ಮೇಲುಕೋಟೆಗೆ ಸಮರ್ಪಿತವಾದುದು ಶ್ರೀಕೃಷ್ಣನ ಪಾಲಿಗೆ ಸೇರಿದುದು

4 ಕಿರೀಟವು ಸ್ವರ್ಗೀಯವಾಗಿರುವುದರಿಂದಲೂ, ಉತ್ಸವಮೂರ್ತಿಯು ಅವತಾರ ಪುರುಷರುಗಳಿಂದ ಪೂಜಿಸಲ್ಪಟ್ಟಿರುವುದರಿಂದ, ಅಪೃಥಕ್ ಸಿದ್ಧಿಯು ತಪ್ಪುವ ಅವಕಾಶವೇ ಇಲ್ಲ

5 ಅಪೃಥಕ್ ಸಿದ್ಧಿ ಪ್ರದರ್ಶನ ಮತ್ತು ಶರೀರಾತ್ಮ ಸಂಬಂಧದ ವಿವೇಕವನ್ನು ತಿಳಿಸುವ ಉತ್ಸವವಾಗಿದೆ

6 ಶ್ರೀ ರಾಮಾನುಜರ ಕಾಲದಲ್ಲಿ ಈ ಉತ್ಸವ ಮೂರ್ತಿಯನ್ನು ಸಂಪತ್ಕುಮಾರ ಎಂದು ಕರೆದರು ಜೀವನದಲ್ಲಿ ಪ್ರಾಪಂಚಿಕ ಹಿರಿ ಆಸೆಗಳನ್ನು ಗೆದ್ದು, ಅಪೃಥಕ್‌ಸಿದ್ಧಿ ಸಿದ್ಧಾಂತವನ್ನು ರಕ್ಷಿಸಿ, ವರ್ಧಿಸಿ, ಅನನ್ಯತ್ವದ ಪ್ರಾಮುಖ್ಯತೆಯನ್ನು ಸ್ಥಾಪಿಸಿದ ರಾಮಾನುಜರ ಸಂಪತ್ಕುಮಾರನೇ ಪ್ರೇಮಾತಿಶಯದ ಅಪರ ಬಾಲಕ ಶೆಲ್ಲಪಿಳ್ಳೆ ಮತ್ತಾರೂ ಅಲ್ಲದೆ ಸಾಕ್ಷಾತ್ ಸರ್ವೇಶ್ವರ

7 ವೈರಮುಡಿ ಉತ್ಸವವು ತತ್ತ್ವಜ್ಞಾನದ ಸತ್ಯತೆಯನ್ನು ಮಾನವನ ಬರಿಯ ಕಣ್ಣಿಗೆ ಪ್ರದರ್ಶನ ಮಾಡಿ, ಚೇತನವರ್ಗವು ತಮ್ಮ ಮನಸ್ಸನ್ನು ಪವಿತ್ರವಾಗಿಸಿಕೊಂಡು ಲೋಪವಿಲ್ಲದಂತೆ ಸ್ಥಿರವಾಗಿ ಪರಿವರ್ತನ ಹೊಂದಿ ಆತ್ಮೋಜ್ಜೀವನಕ್ಕೆ ಉತ್ತಮವಾದ ಪ್ರತಿವರ್ಷದ ಪ್ರಕಾಶನವಾಗಿದೆ

ಯತಿರಾಜಸುತಂ ಯತಿಶೈಲಪತಿಂ
ಶಠಗೋಪ ಮುನೀಶ್ವರಂ ವಾಗ್ವಿಶಯಂ
ಕಮಲಾದಯಿತಂ ವಿಭುಂ ಅಪ್ರತಿಮಂ
ಸುಖದಂ ಸಲಭಂ ಸುಭಗಂ ಕಲಯೇ

ಅಪೃಥಕ್‌ಸಿದ್ಧಿ ಪ್ರದರ್ಶನ ದ್ಯೋತಕಂ
ಉಪಾದಾನ ನಿಮಿತ್ತ ದ್ವಯಗುಣ ಸಹಿತಂ
ಮಕಾರ ಜ್ಞಾನಂ, ಸಂಪತ್ ಪಾದ ಸೇವನಂ
ವೈರಮುಡಿ ಪರತ್ವ ಪ್ರಕಾಶನಂ



ಸಂದರ್ಶಿಸಿ ಆನಂದಿಸಿ

# ಪ್ರಾಕ್ತನ ವಸ್ತು ಸಂಗ್ರಹಾಲಯ

ಸನಾತನ ಧರ್ಮದ ಮೌಲ್ಯ, ಹಿರಿಮೆ, ಪರಂಪರೆ, ಸಂಸ್ಕೃತಿಗಳ ಪ್ರಸಾರದಲ್ಲಿ ತಿರುಮಲೆ ತಿರುಪತಿ ದೇವಸ್ಥಾನಗಳು ಹಲವು ರೀತಿಯಲ್ಲಿ ಕೆಲಸಮಾಡುತ್ತಿದ್ದು, ಈ ಉದ್ದೇಶ ಸಾದನೆಗಾಗಿ ತಿರುಮಲೆ ಹಾಗೂ ತಿರುಪತಿಗಳಲ್ಲಿ ಪುರಾವಸ್ತು ಪ್ರದರ್ಶನಶಾಲೆಗಳನ್ನು ಏರ್ಪಡಿಸಲಾಗಿದೆ

ತಿರುಮಲೆಯ ಸಾವಿರ ಕಂಬದ ಸಂಭಾಂಗಣದಲ್ಲಿ ತಿರುಪತಿ ತಿರುಮಲೆಗಳ ಪರಿಸರದಲ್ಲಿ ದೊರೆತ ಎಲ್ಲ ಪುರಾವಸ್ತುಗಳನ್ನು, ಮಾನವ ಶಾಸ್ತ್ರ, ಪ್ರಾಕ್ ವಸ್ತುಗಳನ್ನೂ ನೆಲ, ಸಸ್ಯಗಳ ಬಗೆಗಳನ್ನೂ, ವಾಸ್ತು ವಿಗ್ರಹ ಶಿಲ್ಪಗಳನ್ನೂ ದೇವಾಲಯಗಳ ಆಚಾರ ವಿಚಾರಗಳನ್ನೂ ಸಂಗ್ರಹಿಸಲಾಗಿದೆ ಇಲ್ಲಿ ಅಪರೂಪದ ಮರದ ಕೆತ್ತನೆಗಳೂ, ಶಿಲ್ಪಗಳೂ, ಲೋಹ ವಿಗ್ರಹಗಳೂ, ಸಂಗೀತದ ವಿವಿಧ ಪ್ರಾಚೀನ ವಾದ್ಯ ವಿಶೇಷಗಳೂ, ತಿ ತಿ ದೇ ಮತ್ತಿತರ ಕಡೆಗಳಲ್ಲಿ ದೊರೆತ ಆಯುದಗಳೂ ಪ್ರದರ್ಶಿತವಾಗಿವೆ ಬೇರೆ ಬೇರೆ ಜಮೀಂದಾರರಿಂದ ದಿವಂಗತ ವೇಟೂರಿ ಪ್ರಭಾಕರಶಾಸ್ತ್ರಿಯವರು ಸಂಗ್ರಹಿಸಿದ ವಸ್ತುಗಳೂ ಇಲ್ಲಿವೆ ೧೯೮೦ ಡಿಸೆಂಬರ್ ೨೭ ರಂದು ಅಂದಿನ ರಾಷ್ಟ್ರಾಧ್ಯಕ್ಷರಾಗಿದ್ದ ಶ್ರೀ ಎನ್ ಸಂಜೀವರೆಡ್ಡಿಯವರು ಈ ವಸ್ತು ಪ್ರದರ್ಶನ ಶಾಲೆಯನ್ನು ಉದ್ಘಾಟಿಸಿದರು

ತಿರುಪತಿಯ ಶ್ರೀ ಗೋವಿಂದರಾಜಸ್ವಾಮಿ ದೇವಾಲಯದ ಬಳಿಯ ಕಚೇರಿನಮ್ಮಾಳ್ವಾರ್ ದೇವಾಲಯದ ಪೆರಿಯಾಳ್ವಾರ್ ಮಂಟಪದಲ್ಲಿ, ವೈಷ್ಣವ ದೇವಾಲಯ ಕಲೆಗೆಂದು ಮೀಸಲಾದ ಶ್ರೀ ವೆಂಕಟೇಶ್ವರ ವಾಸ್ತುಕಲಾವಸ್ತು ಸಂಗ್ರಹಾಲಯವನ್ನು ಏರ್ಪಡಿಸಲಾಗಿದೆ ಈ ಸಂಗ್ರಹಾಲಯದಲ್ಲಿ ವೈಷ್ಣವತೆಯ ವೆ ಶಿಷ್ಟವನ್ನು ಗಿವರಿಸಲು ಪ್ರಯತ್ನಿಸಲಾಗಿದೆ ಇದರ ಹಲವು ವಿಭಾಗಗಳೆಂದರೆ---

ವಾಸ್ತುಶಾಸ್ತ್ರ ಈ ವಿಭಾಗದಲ್ಲಿ ದೇವಾಲಯ ನಿರ್ಮಾಣದಲ್ಲಿನ ಯೋಜನಾವಿವರಗಳನ್ನು ನೀಡಲಾಗಿದೆ ಆಗಮ ಹಾಗೂ ಶಿಲ್ಪಶಾಸ್ತ್ರಗಳು ದೇವಾಲಯದ ನಿರ್ಮಾಣದ ಸ್ಥಳ ನಿರ್ಧಾರ, ಭೂಶುದ್ಧಿ, ವಿಗ್ರಹಗಳ ದಿಕ್ಕು ಹಾಗೂ ಭೂಮಿಯ ನಿರ್ದೇಶನಗಳನ್ನು ನೀಡಿದ್ದು, ಸೂಕ್ತ ವಿವರ ಪಟ್ಟಿಗಳು ಹಾಗೂ ಮಾದರಿಗಳಿಂದ ಈ ವಿವರಗಳನ್ನು ಸ್ಪಷ್ಟಪಡಿಸಲಾಗಿದೆ

ಶಿಲ್ಪಶಾಸ್ತ್ರ ಈ ವಿಭಾಗದಲ್ಲಿ ವಿಗ್ರಹಗಳ ಉದ್ದಳತೆಗಳು ಸಾಪೇಕ್ಷವಾದುದೆಂಬುದನ್ನು ವಿವರಿಸಿ ಅವು ಸ್ಥಳೀಯ ಹಾಗೂ ಯಾಜಮಾನ್ಯವನ್ನು ಅನುಸರಿಸುವುದೆಂದು ವಿವರಿಸಲಾಗಿದೆ

ವಿಗ್ರಹಗಳು ವಿಷ್ಣುವಿನ ಹಲವಾರು ರೂಪಗಳ, ಭಂಗಿಗಳೂ, ಆಭರಣಗಳೂ ವ್ಯಾವೃತವಾಗಿವೆ

ಆಳ್ವಾರ್‌ಗಳು ವಿಶಿಷ್ಟಾದ್ವೈತ ತತ್ತ್ವದ ಪ್ರಪತ್ತಿ ಮಾರ್ಗಕ್ಕೆ ಆಳ್ವರರ ಸಂದೇಶಗಳೇ ಆಧಾರ ಶ್ರೀ ರಾಮಾನುಜಾಚಾರ್ಯರು ಆಳ್ವಾರರನ್ನು ಆರಾಧಿಸುತ್ತಿದ್ದರು

ಸಮಯಾಚಾರಗಳು ಸನಾತನದ ಧರ್ಮದಲ್ಲಿ ಹುಟ್ಟಿನಿಂದ ಸಾವಿನವರೆಗೆ ಹದಿನಾರು ಸಂಸ್ಕಾರಗಳಿಗೆ ಪ್ರಾಮುಖ್ಯವಿದೆ ವಿಷ್ಣುದೇವಾಲಯದಲ್ಲಿ ಬಳಸಲಾಗುವ ಎಲ್ಲ ಪರಿಕರಗಳ ವಿವರಗಳೂ, ಹೋಮ ಕುಂಡ ಹಾಗೂ ವಾಹನಗಳ ಮಾದರಿಗಳೂ ಇವೆ ೧೦೮ ದಿವ್ಯಕ್ಷೇತ್ರಗಳೂ ೧೦೮ ತಿರುಪತಿಗಳೆಂದೇ ಪ್ರಸಿದ್ಧವಾಗಿರುವ ವೈಷ್ಣವ ಕ್ಷೇತ್ರಗಳ ಚಿತ್ರಗಳ ಮೂಲಕ ಈ ದೇವಾಲಯಗಳ ವಾಸ್ತುಶಿಲ್ಪದ ಪರಿಚಯವನ್ನು ನೀಡಲಾಗಿದೆ

ಕಲೆ ಹರಿದಾಸರ ಹಿರಿಮೆಯನ್ನೂ, ಭರತನಾಟ್ಯಾದಿ ಕಲೆಗಳನ್ನೂ ವಿವರಿಸಲಾಗಿದೆ ವಿಷ್ಣು, ಶಕ್ತಿ, ಷಣ್ಮುಖ, ಮೊದಲಾದ ಅನೇ ಶತಕದ ವಿಗ್ರಹಗಳಿಂದ ಆರಂಭವಾದ ಸಂಗ್ರಹ ಆಕರ್ಷಕವಾಗಿದೆ ೩ನೇ ರಾಜರಾಜನ ಕುಂತ್ರಪಾಕಂ ದೇವಾಲಯದಿಂದ ಸಂಗ್ರಹಿತವಾದ ಚಾರಿತ್ರಿಕ ವಿವರಗಳಿವೆ

ಪರಂಪರೆಯ ಪರಿಚಯ ಹೊಂದಿರಿ --- ಒಮ್ಮೆಭೇಟಿ ನೀಡಿರಿ

---

**ಕಾಲ ಬೆಳಗ್ಗೆ ೮ ರಿಂದ**
**ರಾತ್ರಿ ೮ ರ ವರೆಗೆ**

**ಟಿಕೆಟ್ ರೂ ೧--೦೦ (ಹಿರಿಯರಿಗೆ)**
**" " ೦--೫೦ (ಕಿರಿಯರಿಗೆ)**

# ವಿದ್ಯಾಭ್ಯಾಸ ಮತ್ತು ಅನ್ನಮಾಚಾರ್ಯ

---ವಿದ್ವಾನ್ ಬ ನ ಗುಂಡೂರಾವ್

ಈ ಲೇಖನದ ಶೀರ್ಷಿಕೆ ಓದುಗರಿಗೆ ಅಚ್ಚರಿ ತರುವುದರಲ್ಲಿ ಸಂದೇಹವಿಲ್ಲ ಸರಸಸಂಗೀತ ಕಲಾ ಕೋವಿದನೂ, ಶೇಷಾದ್ರಿನಿಲಯನ ಚರಣನಳಿನಾ ರಾದನ ತತ್ಪರನೂ ಆದ ಭಕ್ತವರ ತಾಳ್ಳಪಾಕಂ ಅನ್ನಮಾಚಾರ್ಯನಿಗೂ ವಿದ್ಯಾಭ್ಯಾಸಕ್ಕೂ ಸಂಬಂ ದವೇನು? ಇದು ಅನ್ನಮಾಚಾರ್ಯನ ವಿದ್ಯಾಭ್ಯಾಸ -- ವಿದ್ಯಾರ್ಹತೆಗೆ ಸಂಬಂದಪಟ್ಟ ಲೇಖನವಲ್ಲ ಏಕೆಂದರೆ ದೈವಸಾಕ್ಷಾತ್ಕಾರ ಸೌಭಾಗ್ಯ ಪಡದ ಪುಣ್ಯ ಜೀವಿಗಳಿಗೂ ವಿದ್ಯಾಭ್ಯಾಸಕ್ಕೂ ಎಳ್ಳಷ್ಟೂ ಸಂಬಂ ದವಿಲ್ಲ ಇಂದು ಶಾಲಾಕಾಲೇಜುಗಳಲ್ಲಿ ಕಲಿತವರೇ - ಅಲ್ಲಿಂದ ವಿದ್ಯಾವಂತರೆಂದು ಪ್ರಶಸ್ತಿಪತ್ರಗಳನ್ನು ಪಡೆದವರೇ -- ವಿದ್ಯಾವಂತರೆಂಬ ಅಬಿಪ್ರಾಯ ಸಮಾಜದಲ್ಲಿದೆ ಇಲ್ಲಿ ಒಂದು ಸ್ವಾರಸ್ಯ ಸಂಗತಿ ಯೆಂದರೆ ಮಾನಸಿಕ ನೆಮ್ಮದಿಗಾಗಿ ಹತ್ತು ನಿಮಿ ಷಕಾಲ ದ್ಯಾನ -- ಬಜನೆಗಳಲ್ಲಿ ಕಳೆಯಲು ಕಾಲಾ ವಕಾಶವಿಲ್ಲವೆಂಬ ಜನ, ತಮ್ಮ ಹೆಸರಿನ ಮುಂದೆ ಜೋಡಿಸಿಕೊಳ್ಳಲು -- ಎರಡೋ -- ಮೂರೋ -- ಅಕ್ಷರಗಳನ್ನು ಸಂಪಾದಿಸಲು, ಹತ್ತಾರು ವರ್ಷ -- ಹತ್ತಾರು ಸಹಸ್ರರೂಪಾಯಿ, ಖರ್ಚುಮಾಡುವು ದನ್ನು ನಾವಿಂದು ಲೋಕದಲ್ಲಿ ನೋಡುತ್ತಿದ್ದೇವೆ

ವಿನಯ ವಿದ್ಯೆಗೆ ಭೂಷಣ -- ಅಲಂಕಾರ ಅಹಂ ಕಾರ ವಿದ್ಯೆಗೆ ಮಾರಕ -- ಅಪಾಯ ಮಾರಕ ವಸ್ತು ಗಳನ್ನೇ ಸ್ವೀಕರಿಸುವುದು ನವ್ಯನಾಗರಿಕತೆಯ ಗುರಿ -- ಪ್ರಮುಖ ಲಕ್ಷಣ - ವೆಂದು ಕೆಲವುಮಂದಿ ಹಿರಿಯರು ಅಭಿಪ್ರಾಯಪಡುವುದು ನಿರಾದಾರಕಲ್ಪ ನೆಯೇನಲ್ಲವೆಂದು ಹೇಳಬಹುದು

ಮಾನವ ಸಮಾಜದಲ್ಲಿ ವಿದ್ಯಾಭ್ಯಾಸ ಜಾರಿಗೆ ಬಂದದ್ದು ಶತಶತಮಾನಗಳ ಹಿಂದೆ -- ಯುಗ ಯುಗಗಳ ಹಿಂದೆ ಶತಮಾನಗಳು ಉರುಳಿದಂ ತೆಲ್ಲ ವಿದ್ಯಾಭ್ಯಾಸದ ಗೊತ್ತುಗುರಿಗಳು ಬದಲಾಗು ತ್ತಬಂತು

ವಾಗ್ಗೇಯಕಾರ ಶಿರೋಮಣಿ ಅನ್ನಮಾಚಾರ್ಯ ಕೃತತ್ರೇತಾಯುಗಗಳಿಗೆ ಸಂಬಂದ ಪಟ್ಟ ವ್ಯಕ್ತಿಯೇ ನಲ್ಲ -- ಕಲಿಯುಗದವನೇ ಕೆಲವು ನೂರುವರ್ಷ ಗಳ ಹಿಂದಿನವನು ಈತನು ರಚಿಸಿದ ದಿವ್ಯಬಾವ್ಯ ಸಂಗೀತಕೃತಿಗಳಲ್ಲಿ - ಪದಗಳಲ್ಲಿ - ಭಕ್ತಿಜ್ಞಾನ ವೈರಾಗ್ಯಕ್ಕೆ ಹೆಚ್ಚು ಒತ್ತುಕೊಡಲಾಗಿದೆ ಶರಣಾಗತಿ ತತ್ವಕ್ಕೆ ಶ್ರಿಯ ಪತಿ ಶ್ರೀನಿವಾಸನ ದಿವ್ಯಮಂಗಳ ಅಲೌ ಕಿಕ ಲಾವಣ್ಯಕ್ಕೆ -- ಲೀಲಾವಿನೋದಕ್ಕೆ - ಮಹತ್ವ ಕೊಡಲಾಗಿದ ಅವದ ಯಾವುದನ್ನು ಈಗ ಜಗತ್ತು - ಜೀವನ ಮೌಲ್ಯಗಳು - Values of Life ಯೆಂದು ಗುರುತಿಸಿ ಕರೆಯುತ್ತಿದ -- ಅದಲ್ಲವನ್ನೂ ಈ ಕ್ರಾಂತದರ್ಶಿ ಕಂಡಿದ್ದಾನೆ

ವಿದ್ಯೆಯೆಂದರೆ ಆಧ್ಯಾತ್ಮವಿದ್ಯೆಯೇ ಎಂದು ಶ್ರೀಕೃಷ್ಣಪರಮಾತ್ಮನು ಭಗವದ್ಗೀತೆಯಲ್ಲಿ ಅಭಿ ಪ್ರಾಯಪಟ್ಟಿದ ಪರಾವಿದ್ಯೆ ಅಪರಾವಿದ್ಯೆಗಳ ಬಗ್ಗೆ ವೇದಾಂತ ಗ್ರಂದಗಳಲ್ಲಿ ಉಲ್ಲೇಖವಿದೆ ಅವಿ ದ್ಯಯಾ ಮೃತ್ಯುಂ ತೀರ್ತ್ವಾ ವಿದ್ಯಯಾ ಅಮೃತ ಮಶ್ನುತೇ ಎಂಬ ಶ್ರುತ್ಯೋಕ್ತಿ ಇದೆ ಹೀಗೆ ವಿದ್ಯೆಯೆಂಬ ಬಗ್ಗೆ ನಾನಾ ರೀತಿಯ ವಿವರಣೆಗ ಳುಂಟು ವ್ಯಾವಹಾರಿಕದೃಷ್ಟಿಯಿಂದ ನೋಡಿ ದರೂ ಸಹ ವಿದ್ಯಾವಂತ ಅವಿದ್ಯಾವಂತರ ನಡುವ



ಳಿಕೆಗಳಲ್ಲಿ ಅಂತರ ಕಾಣುವುದುಂಟು ವಿದ್ಯಾವಂತ ಬೇರೆ -- ಸಂಸ್ಕಾರವಂತ ಬೇರೆ, ವಿದ್ಯಾವಂತ ಬೇರೆ ಬುದ್ಧಿವಂತ ಬೇರೆ

ಅನ್ನಮಾಚಾರ್ಯ ಪೂರ್ವಯುಗಗಳ ವಿದ್ಯೆಗೂ ಕಲಿಯುಗದ ವಿದ್ಯೆಗೂ ಇರುವ ವ್ಯತ್ಯಾಸವನ್ನು ತನ್ನ ಒಂದು ಕವಿತೆಯಲ್ಲಿ ಪ್ರಸ್ತಾಪ ಮಾಡಿದ್ದಾನೆ ಬಹುಶ ಸಹಜಶುಚ ಸಂಸ್ಕಾರ ಸಂಪನ್ನನಾದ ಭಕ್ತವರ ಪ್ರಹ್ಲಾದನನ್ನು ವಿದ್ಯಾವಂತನಾಗಿ ಮಾಡಬೇಕೆಂದು ಹಿರಣ್ಯಕಶ್ಯಪ ಬಯಸಿ ದೈತ್ಯಗುರು ಪುತ್ರರ ಬಳಿಗೆ ಕಳಿಸಿದ ಕದೆ ಈ ವಾಗ್ಗೇಯಕಾರ ಶಿರೋಮಣಿಗೆ ನೆನಪಾಗಿರಬಹುದು ಕವಿತೆ ಹೀಗಿದೆ- -

ನಾಟಕಿನಾಡೇ ನಾಚದುವು
ಮಾಟಲಾಡುಚುನು ಮರಚೇಟಿ ಚದುವು || ಪ ||
ಎನ್ನಗನೀತನಿ ಎರುಗುಟಕೇ ಪೋ
ವೆನಕವಾರು ಚದಿವಿನ ಚದುವು
ಮನಸುನ ನೀತಿನಿ ಮರಚುಟಕೇ ಪೋ
ಪನಿವಡಿ ಇಪ್ಪಟಿ ಪ್ರೌಢುಲ ಚದುವು || ೧ ||

ತೆಲಿಸಿ ಇತನಿನೇ ತೆಲಿಯುಟಕೇ ಪೋ
ತೊಲುತ ಕೃತಯುಗಾದುಲ ಚದುವು
ಕಲಿಗಿನ ಈತನಿ ಕಾದನನೇ ಪೋ
ಕಲಿಯುಗಂಬುಲೋ ಕಲಿಗಿನ ಚದುವು || ೨ ||

ಪರಮನಿ ವೇಂಕಟಪತಿ ಗನುಟಕ ಪೋ
ದೊರಲಗು ಬ್ರಹ್ಮಾದುಲ ಚದುವು
ಸಿರುಲ ನಿತನಿ ಮರಚೆಡಿ ಕೊರಕೇ
ವಿರಸಪು ಜೀವುಲ ವಿದ್ಯಲ ಚದುವು || ೩ ||

ಭಕ್ತವರ ಅನ್ನಮಾಚಾರ್ಯನಿಗೆ ತಿರುವೇಂಕಟಾದೀಶ ಶ್ರೀನಿವಾಸನೆಂದರೆ ಸಾಕ್ಷಾತ್ ಪರಬ್ರಹ್ಮವಸ್ತು ಆರಾಧ್ಯದೈವ ಕಲ್ಪವೃಕ್ಷ -- ಕಾಮದೇನು ಈ ಭಕ್ತನ ಮನಸ್ಸಿನಲ್ಲಿ -- ವಿದ್ಯೆ -- ಎಂದರೆ ಒಂದು ಉದಾತ್ತ ಚಿತ್ರವಿದೆ, ಒಂದು ಬವ್ಯತರ ಕಲ್ಪನೆ ಇದೆ ದೈವ ಸಾಕ್ಷಾತ್ಕಾರಕ್ಕೆ ನೆರವಾಗುವ ವಿದ್ಯೆಯೇ ವಿದ್ಯೆ ಉಳಿದೆಲ್ಲವೂ ಬೇರೆ ಮಹಾಕವಿ ಪೋತನಾಮಾತ್ಯನ ಅಬಿಪ್ರಾಯ ಕೇಳಿ -

ಚಕ್ರಹಸ್ತುನಿ ಪ್ರಕಟಿಂಚು ಚದುವು ಚದುವು.
(ಪ್ರಹ್ಲಾದ ಚರಿತ್ರೆ)

ಪೂರ್ವಯುಗದ ಜನ ವಿದ್ಯಾಬ್ಯಾಸ ಮಾಡಿದ್ದೇಕೆ? ಅವರ ವಿದ್ಯೆ ಯಾವ ರೀತಿಯದು? ಅದರ ಗೊತ್ತು ಗುರಿಗಳೇನಿತ್ತು? ಪರಮಾತ್ಮನ ಸಾಕ್ಷಾತ್ಕಾರ - ಬಾಳಿಗೆ ಸಂಸ್ಕಾರಕೊಡುವುದು -- ಮಾನವನನ್ನು ಸದ್ಗುಣಸಂಪನ್ನನಾಗಿ ಮಾಡುವುದು ಇವೆಲ್ಲ ಹಿಂದಿನ ಕಾಲದ ವಿದ್ಯಾಬ್ಯಾಸದ ಗುರಿಯಾಗಿತ್ತು ಮರ್ಯಾದಾಪುರುಷೋತ್ತಮ ಶ್ರೀರಾಮಚಂದ್ರನ ಬಗ್ಗೆ ಬರೆಯುತ್ತ ಆದಿಕವಿ ಆಡಿರುವ ಮಾತುಗಮನಾರ್ಹ ಬುದ್ಧಿಮಾನ್ ನೀತಿಮಾನ್ -- ಈ ಎರಡೂ ಆಗಿದ್ದವನು ರಾಮಚಂದ್ರ ನೀತಿಮಾನ್ ಆಗದೇ ಕೇವಲ ಬುದ್ಧಿಮಾನ್ ಆಗಿದ್ದರೆ ಹೆಣ್ಣು ಅಂದರೆ ಕಣ್ಣು ಕುರುಡು -- ಎಂಬಂತಾಗುತ್ತದೆ ಹಿಂದಿನವರ ವಿದ್ಯೆ ಪರಮಾತ್ಮದರ್ಶನಕ್ಕಾಗಿ ಇಂದಿನವರ ವಿದ್ಯೆ ನೀತಿಯನ್ನು ಉದಾಸೀನ ಮಾಡಲಿಕ್ಕಾಗಿ ನೀತಿ ಬ್ರಷ್ಟರಾಗಿ ಬಾಳುವುದು ಇಂದಿನ ಫ್ಯಾಷನ್ ಆಗಿದೆ ನೀತಿ ನಿಷ್ಠರಾಗಿ ಬಾಳುವವರನ್ನು ಈ ಜನ, ಹಾಸ್ಯಮಾಡುತ್ತಾರೆ ಹಳೆಯಕಾಲದ ಗೊಡ್ಡು ಸಂಪ್ರದಾಯದವರೆನ್ನುತ್ತಾರೆ

ಬಾಳಿನಲ್ಲಿ ಉದಾತ್ತ ಗುರಿ ಹೊಂದಿ -- ಪರಿಪಕ್ವ ಅನುಬವ ಹೊಂದಿ, ಪರಬ್ರಹ್ಮವಸ್ತುವನ್ನು - ಜಗತ್ತಿನ ಎಲ್ಲ ಕಾರ್ಯಚಟುವಟಿಕೆಗಳ ಮೂಲಕಾರಣವನ್ನು ಅರಿತುಕೊಳ್ಳುವುದು ಕೃತಯುಗಾದಿಗಳಲ್ಲಿ ವಿದ್ಯೆಯೆನಿಸಿಕೊಳ್ಳುತ್ತಿತ್ತು ಕಲಿಯುಗದಲ್ಲಾದರೋ ಪರಾತ್ಪರ ವಸ್ತುವಿನ ಅಸ್ತಿತ್ವದ ಬಗ್ಗೆ ಸಂದೇಹಪಟ್ಟು ಅಲ್ಲಗಳೆದು ಒಣತರ್ಕಮಾಡುವುದೇ ವಿದ್ಯಾವಂತರೆನ್ನಿಸಿಕೊಂಡವರ ಸ್ವಬಾವವಾಗಿದೆ ಈಗ ಸಾಕ್ಷರರು ರಾಕ್ಷಸರಾಗಿದ್ದಾರೆಂದು ಜಗತ್ತಿನ ಅನುಬವಕ್ಕೆ ಬರಹತ್ತಿದೆ

ಆ ಬ್ರಹ್ಮಕೀಟಪರ್ಯಂತ ಸೃಷ್ಟಿಯ ಕಣಕಣದಲ್ಲೂ ತುಂಬಿರುವ ಚಿನ್ಮಯಿಶಕ್ತಿಯನ್ನು ತಾನೆ ಬಗವಂತನೆನ್ನುವುದು? ಆತನನ್ನು ಕಾಣುವ ವಿದ್ಯೆಗೆ ಬ್ರಹ್ಮವಿದ್ಯೆಯೆಂದು ಬಾರತೀಯರು ನಾಮಕರಣ ಮಾಡಿದ್ದಾರೆ ಈ ಅಂತಸ್ಸೂತ್ರ ಚೇತನ ಯಾರು? ಅನ್ನಮಯ್ಯನ ದೃಷ್ಟಿಯಲ್ಲಿ ಶ್ರೀನಿವಾಸ ಆತನನ್ನ ವ್ಯಕ್ತಿ ತನ್ನಂತರಂಗದಲ್ಲೇ ಕಂಡು ಆನಂದಿಸಿದರೂ ಆಯ್ತು ಅದವ - ಜಗತ್ತೆಲ್ಲ ಜಗದೀಶ್ವರನೆಯೆಂದು ಕಣಕಣದಲ್ಲೂ ಸ್ವಾಮಿಯದರ್ಶನ ಮಾಡುವ ಶುದ್ಧ ದೃಷ್ಟಿ ಬೆಳೆಸಿಕೊಂಡರೂ ಆಯ್ತು

ಇದನ್ನೇ ಗೀತೆ -- ವಾಸುದೇವಸ್ಸರ್ವಮಿತಿ ಎನ್ನುತ್ತದೆ ಬಗವದ್ದರ್ಶನದ ವಿದ್ಯೆ ಹಿಂದೆ ಇತ್ತು ಈಗ - ಸಿರುಲ ನಿತನಿ ಮರಚೆಡಿ ಕೊರಕೆ -- ದನಮದಾಂದರಾಗಿ -- ಅದಿಕಾರಮತ್ತರಾಗಿ, ಈ ಕರುಣಾ ಜಲದಿಯನ್ನು ಮರೆಯುವುದು ಉದ್ದೇಶವಾಗಿದೆ ಶ್ರದ್ಧಾ ಪ್ರದಾನ ವಿದ್ಯೆ ಹೋಗಿ ತರ್ಕಪ್ರದಾನ ವಿದ್ಯೆ ಬಂದಾಗ ಮಾನವ ಸಂಶಯದ ಸುಳಿಯಲ್ಲಿ ಸಿಕ್ಕಿ ಹಾಕಿಕೊಳ್ಳುತ್ತಾನೆ ಬಾಳಿನಲ್ಲಿ ನೆಮ್ಮದಿ ಕಳೆದುಕೊಳ್ಳುತ್ತಾನೆ ಶಾಂತಿ ಕಳೆದುಕೊಳ್ಳುತ್ತಾನೆ ಮಾನಸಿಕ ಶಾಂತಿ ಇಲ್ಲವೆಂದರೆ ಏನಿದ್ದರೇನು -- ಎಷ್ಟಿದ್ದರೇನು? ಜೀವನದಲ್ಲಿ ಸರಸತೆ ಮಾಯವಾಗಿ ವಿರಸತೆ ತಲೆ ಹಾಕುತ್ತದೆ ವಿರಸಪುಜೀವುಲವಿದ್ಯ -- ಎಂದರೆ ಇದೇ ಅರ್ದ

ಅರ್ದ -- ಕಾಮ - ಈ ಎರಡಕ್ಕೇ ಮಹತ್ವಕೊಡುವ ಈ ಕಾಲದಲ್ಲಿ, ಬೌತಿಕ ಸುಖಸಾಮಗ್ರಿಗಳ ಸಂಗ್ರಹಣೆಯೇ ಜನರ ಪರಮ ಗುರಿಯಾಗಿದೆ ತದನುಕೂಲವಾದ ವಿದ್ಯೆ ಪ್ರಚಾರದಲ್ಲಿದೆ ಸ್ವಪ್ರೇರಣೆ ದೂರ ಸರಿದು ಕಡ್ಡಾಯಶಿಕ್ಷಣ ಜಾರಿಗೆ ತಂದಿರುವ ಈ ಕಾಲದ ಶಿಕ್ಷಣ ತಜ್ಞರು - ಈ ವಾಗ್ಗೇಯಕಾರನ ಈ ಕವಿತೆಯ ಹಿಂದಿರುವ ಬಾರತೀಯ ಸಂಸ್ಕೃತಿಯನ್ನರಿತರೆ ಒಳ್ಳೆಯದು ನೈತಿಕ ಶಿಕ್ಷಣದ ಅಗತ್ಯವನ್ನು ಇನ್ನಾದರೂ ಅರಿತುಕೊಂಡರೆ ಕ್ಷೇಮ ಅನ್ನಮಾರ್ಯನ ದೃಷ್ಟಿಯಲ್ಲಿ ನೈತಿಕಶಿಕ್ಷಣ -- ಅದ್ಯಾತ್ಮಶಿಕ್ಷಣ ಬೇರೆಬೇರೆಯಲ್ಲ ಶುದ್ಧ ಬಾರತೀಯ ವಿದ್ಯೆಯತ್ತ ನಮ್ಮ ಗಮನವನ್ನು ಈ ಕವಿತೆಯ ಮೂಲಕ ಈ ಮಹಾಪುರುಷ ಸೆಳೆಯುತ್ತಿದ್ದಾನೆ

ಬಾರತೀಯ ಶಿಕ್ಷಣ ರಂಗದಲ್ಲಿ ನೂತನ ಬವ್ಯ ಬಾಸ್ಕರೋದಯವಾದೀತೇ ? ಅನ್ನಮಯ್ಯನ ಈ ಕಾವ್ಯ ಆಶಯ ಸಾಕಾರವಾದೀತೆ?

# ಸನಾತನ ಧರ್ಮ

---ಎಚ್ ವಿ ನರಸಿಂಹಮೂರ್ತಿ

'ಏಕಂ ಸದ್ವಿಪ್ರಾ ಬಹುದಾ ವದನ್ತಿ' -- ತತ್ವ ಒಂದೇ, ಜ್ಞಾನಿಗಳು ಅವನ್ನೇ ಬಹುವಿಧವಾಗಿ ಕರೆಯುತ್ತಾರೆ, ಯಾವದಾರಿಯಲ್ಲಿ ನಡೆಯಲಿ, ಸೇರಬೇಕಾದ ಸ್ಥಳ ಒಂದೇ ಯಾವ ದೇವರನ್ನು ಬಜಿಸಲಿ, ಎಲ್ಲವೂ ಪರಮಾತ್ಮನನ್ನೇ ಮುಟ್ಟುತ್ತವೆ ಈ ಉದಾರ ಮನೋಬಾವವನ್ನು ಜಗತ್ತಿಗೆ ನೀಡಿದ ದರ್ಮ, ಸನಾತನ ದರ್ಮ

ಜಗತ್ತಿನಾದ್ಯಂತ ಅತಿಶ್ರೇಷ್ಠದರ್ಮವೆಂದು ಮನ್ನಣೆಗಳಿಸಿದ ದರ್ಮ, ಸನಾತನ ದರ್ಮ ಇದು ಸರ್ವವ್ಯಾಪಕವಾದ ಸುಂದರ ದರ್ಮ, ಸರ್ವದರ್ಮ ಸಮನ್ವಯಾತ್ಮಕ ದರ್ಮ, ಕಲ್ಯಾಣಕಾರಕ ದರ್ಮ ಮಹಾಮಹಿಮರೂ, ನಿಸ್ಪೃಹರೂ, ಲೋಕಹಿತೈಷಿಗಳೂ ನಿರ್ಜನ ವಿಪಿನಗಳಲ್ಲಿ ಮಾನವನ ಆತ್ಮೋನ್ನತಿಗಾಗಿ, ಮಾನವನ ಮಂಗಳಾರ್ದವಾಗಿ ಪ್ರತಿಪಾದಿತವಾದದ್ದು, ಇದು ದರ್ಮ ಸಂಸ್ಥಾಪಕರಾದ ಅವತಾರ ಪುರುಷರಿಂದ ಇದರ ಉದ್ಧಾರ, ಪುರಾಣ ಪುಣ್ಯಕದೆಗಳಲ್ಲಿ ಇದರ ಪ್ರತಿಪಾದನೆ, ತತ್ವದರ್ಶಿಗಳಿಂದ ಇದರ ಉಪದೇಶ ಶತ - ಶತಮಾನಗಳ, ಯುಗ - ಯುಗಗಳ ಪರ್ಷಣೆಗೆ ಸಿಲುಕಿ ನಷ್ಟವಾಗದೆ, ಪರಿಪುಷ್ಟವಾಗಿ ಬೆಳೆದು ಅನಂತವಾದ ಕಾಲಸ್ರೋತದ ಅವ್ಯಾಹತ ಪ್ರವಾಹದಲ್ಲಿ ಕೊಚ್ಚಿಹೋಗದೆ ಇಂದಿನವರೆಗೂ ಉಳಿದುಕೊಂಡು ಬಂದಿರುವುದೇ ಇದರ ಮೌಲಿಕತೆಗೆ ಸಾಕ್ಷಿ, ಈ ದರ್ಮದ ಗುರಿ ಸರ್ವೋತ್ಕೃಷ್ಟವಾದ ಶ್ರೇಯಸ್ಸು.

ಮನುಷ್ಯ ಮಾತ್ರನು ಸಾದಿಸಬಹುದಾದ ಚತುರ್ವಿದಪುರುಷಾರ್ದಗಳಲ್ಲಿ ದರ್ಮವೇ ಮೊದಲನೆಯದು, ಬಹುಮುಖ್ಯವಾದುದು, ಶ್ರೇಯಸ್ಸಿಗೆ ಸಾದನವಾದದ್ದು ಇಲ್ಲಿ ರಾಮಾಯಣದ ಒಂದು ಶ್ಲೋಕ ತುಂಬ ಗಮನಾರ್ಹ ಅದರಲ್ಲಿ ಶ್ರೀರಾಮಚಂದ್ರನು ಹದಿನಾಲ್ಕು ವರ್ಷಗಳ ವನವಾಸಕ್ಕಾಗಿ ಹೊರಟಾಗ ಅವನ ತಾಯಿ ಕೌಸಲ್ಯಾದೇವಿ ನಮಸ್ಕಾರ ಮಾಡಿದ ಮಗನನ್ನು ಹೀಗೆ ಆಶೀರ್ವದಿಸುತ್ತಾಳೆ 'ಯಂ ಪಾಲಯಸಿ ದರ್ಮ ತ್ವಂ ದೃತ್ಯಾ ಚ ನಿಯಮೇನ ಚ, ಸವೈ ರಾಘವ ಶಾರ್ದೂಲ ದರ್ಮ ಸ್ತ್ವಾಮಭಿರಕ್ಷತು' - ಅಂದರೆ ಯಾವ ದರ್ಮವನ್ನು ಧೃತಿಯಿಂದಲೂ, ನಿಯಮದಿಂದಲೂ ಪಾಲಿಸುತ್ತಿದ್ದೀಯೋ ಅದೇ ದರ್ಮವು ನಿನ್ನನ್ನು ಅಪಾಯದಿಂದ ರಕ್ಷಿಸಲಿ -- ಎಂದರ್ದ ಮಹಾಬಾರತ ಹೇಳುತ್ತದೆ 'ಧರ್ಮೋ ರಕ್ಷತಿ ರಕ್ಷಿತ ' ಅಂದರೆ ನಮ್ಮಿಂದ ಕಾಪಾಡಲ್ಪಟ್ಟ ದರ್ಮವು ನಮ್ಮನ್ನು ಕಾಪಾಡುತ್ತದೆ -- ಎಂದು

ದರ್ಮದ ಸ್ವರೂಪವನ್ನು ವಿವರಿಸುವಾಗ ನಮ್ಮ ಪೂರ್ವಿಕರು 'ದೃತಿ ಕ್ಷಮಾ ದಮೋsಸ್ತೇಯಂ ಶೌಚ ಮಿಂದ್ರಿಯ ನಿಗ್ರಹ , ಧೀರ್ವಿದ್ಯಾ ಸತ್ಯಮಕ್ರೋಧೋ ದಶಕಂ ದರ್ಮಲಕ್ಷಣಮ್' - ಎಂದಿದ್ದಾರೆ ಈಚೆಗೆ ದೇಶಬಕ್ತಿ, ಸರ್ವ ದಯೆ, ಸಮಾಜಸೇವೆ, ಸಮಾಜಕಲ್ಯಾಣ - ಇತ್ಯಾದಿ ದೊಡ್ಡ ದೊಡ್ಡ ಮಾತುಗಳು ಹೆಚ್ಚಾಗಿ ಕೇಳಿಬರುತ್ತಿವೆ ಇವೆಲ್ಲ ನಮ್ಮ ಹಿರಿಯರ ಅನುಷ್ಠಾನದಲ್ಲಿದ್ದುವು ಎಲ್ಲರಿಗೂ ಸಮಪಾಲು ಸಮಬಾಳು, ತಾನು ಒಳ್ಳೆಯ ಜೀವನ್ನು ಬಾಳಿ, ತನ್ನಿಂದ ಆದಷ್ಟು ಹೆಚ್ಚು ಜನಕ್ಕೆ ಪ್ರಯೋಜನವಾಗಬೇಕು 'ಆತ್ಮನೋ ಮೋಕ್ಷಾರ್ದಂ, ಜಗದ್ಧಿತಾಯ ಚ' -- ಇವೆಲ್ಲ ಅವರ ಬಗವದಾರಾದನೆಯ ಒಂದು ಅಂಗವಾಗಿತ್ತು ನಮ್ಮ ಹಿರಿಯರು ಮನೆಯ ಸಣ್ಣಹಂಡೆಯಲ್ಲಿ ನೀರು ಕಾಯಿಸಿ ಸ್ನಾನ ಮಾಡಲಿ ಅದವಾ ತಮ್ಮ-- ತಮ್ಮ ಹಳ್ಳಿಯ ಹೆಸರಿಲ್ಲದ ಹೊಳೆಯಲ್ಲಿ ಮಿಂದಲಿ, 'ಗಂಗೇಚ ಯಮುನೇಚೈವ ಗೋದಾವರಿ ಸರಸ್ವತೀ ನರ್ಮದೇ ಸಿಂದು ಕಾವೇರೀ ಜಲೇsಸ್ಮಿನ್ ಸನ್ನಿದಿಂ ಕುರು' ಎಂದು ಉತ್ತರ ದಕ್ಷಿಣ ಬೇದವಿಲ್ಲದ ಬಾರತದ ಸಪ್ತನದಿಗಳನ್ನೂ ಸ್ನಾನಕಾಲದಲ್ಲಿ ಸ್ಮರಿಸುತ್ತಿದ್ದರು 'ತಾಯಿ ಪಾರ್ವತೀ ದೇವಿ, ತಂದೆ ಮಹೇಶ್ವರ, ಶಿವಬಕ್ತರು ಬಂದುಗಳು ' ಸ್ವದೇಶೋ ಬುವನತ್ರಯಮ್' ಮೂರುಲೋಕವೂ ನನ್ನ ದೇಶ -- ಎಂದು ಬಾವಿಸಿದರು 'ಜನನೀ ಜನ್ಮಬೂಮಿಶ್ಚ ಸ್ವರ್ಗಾದಪಿ ಗರೀ[illegible]

[illegible]

ದ ಪರಿಸ್ಥಿತಿಯಲ್ಲಿಯೂ [illegible] ಗೊತ್ತಾದ ಸಮಯದಲ್ಲಿ [illegible], [illegible] ಚಿತ್ರದ ಮುಂದೆ ಮಾತ್ರ ಎರಡು ಕೈಗಳೆತ್ತಿ ಮಾಡುವುದಾಗಿರಲಿಲ್ಲ ಅದು ಎಲ್ಲ ಸಮಯದಲ್ಲಿಯೂ, ಎಲ್ಲ ಕಡೆಯಲ್ಲಿಯೂ, ಎಲ್ಲ ಋತುಗಳಲ್ಲಿಯೂ ತುಂಬಿ ತುಳುಕುತ್ತಿತ್ತು [illegible] ವಾಗ [illegible], [illegible] ಯಾಗ [illegible], [illegible] ವಾಗ [illegible], [illegible] ಮಾಡುವಾಗ [illegible], [illegible] ಮಾತನಲ್ಲಿ [illegible] ವಾದರು, [illegible] ದರೂ [illegible], ತತ್ತದಖಿಲಂ [illegible] ತವಾರಾದನಮ್ [illegible] ಬಗವದರ್ಪಣ ಬುದ್ಧಿಯಿಂದ ಎಲ್ಲ ಕೆಲಸಗಳನ್ನು ಮಾಡುವ [illegible] ಎಂಬುದು ಸನಾತನ ದರ್ಮದ [illegible] ವೈಶಿಷ್ಟ್ಯ ಬಗವಂತನಲ್ಲಿ ಬೇಡುವುದಾದರೂ ಏನು? ನನ್ನನ್ನಷ್ಟೇ ಕಾಪಾಡು ಎಂದಲ್ಲ, ನಮ್ಮ ಮನೆಯವರನ್ನಷ್ಟೇ ರಕ್ಷಿಸು - ಎಂದೂ ಅಲ್ಲ, ಮೂರು ಲೋಕಕ್ಕೂ ಮಂಗಳವನ್ನುಂಟು ಮಾಡಪ್ಪ - 'ತ್ರೈಲೋಕ್ಯಂ ಮಂಗಳಂ ಕುರು' - ಎಂದು 'ಸರ್ವೇ ಬವಂತು ಸುಖಿನ ಸರ್ವೇಸಂತು ನಿರಾಮಯಾ , ಸರ್ವೇ ಬದ್ರಾಣಿ ಪಶ್ಯಂತು ಮಾ ಕಶ್ಚಿದ್ದು ಖಬಾಗ್‌ಬವ ತ್' ಅಂದರೆ ಎಲ್ಲರೂ ಸುಖವಾಗಿರಲಿ, ಯಾರಿಗೂ ರೋಗಬಾರದಿರಲಿ, ಎಲ್ಲರೂ ಬದುಕಿನಲ್ಲಿ ಮಂಗಳವನ್ನು ಕಾಣಲಿ, ಯಾರಿಗೂ ದು ಖಬಾರದಿರಲಿ ಎಂಬುದು ಸನಾತನ ದರ್ಮಾನುಯಾಯಿಗಳೆಲ್ಲರೂ ಭಗವಂತನಲ್ಲಿ ಇಡುವ ಮೊರೆ

# ತಿರುಮಲೆ ತಿರುಪತಿ ದೇವಸ್ಥಾನಗಳು --- ತಿರುಪತಿ

# ತಿರುಮಲೆಯಲ್ಲಿ ವಸತಿಗಾಗಿ ದಾನಯೋಜನೆ

"ಸ್ವಲ್ಪವೇ ಸಂಪದವನ್ನು ನೀಡಿರಿ, ದೈವಿಕ ಫಲವನ್ನು ಪಡೆಯಿರಿ"

ಶ್ರೀ ವೆಂಕಟೇಶ್ವರಸ್ವಾಮಿ ಸನ್ನಿಧಿಯಾದ ತಿರುಮಲೆ ಕಲಿಯುಗ ವೈಕುಂಠವಾಗಿದ್ದು, ದಿನವೂ ಸಹಸ್ರಾರು ಮಂದಿ ಯಾತ್ರಿಕರು ಸ್ವಾಮಿ ದರ್ಶನಕ್ಕಾಗಿ ಆಗಮಿಸುತ್ತಾರೆ ದಿನದಿನವೂ ಹೆಚ್ಚುತ್ತಿರುವ ಯಾತ್ರಿಕ ಸಂದಣಿಯ ವಸತಿ ಸೌಲಭ್ಯಗಳ ಏರ್ಪಾಡಿಗಾಗಿ ತಿ ತಿ ದೇ ಗಳು ಸುಸಜ್ಜಿತ ಅತಿಥಿಗೃಹಗಳನ್ನೂ, ಈಗಿರುವ ಕಾಟೇಜುಗಳ ಮೇಲೆ ಮೊದಲ ಅಂತಸ್ತು ಕೊರಡಿಗಳನ್ನೂ, ಸಪ್ತಗಿರಿ ಸತ್ರಗಳ ಕೋಣೆಗಳನ್ನೂ ದಾನಯೋಜನೆಯಲ್ಲಿ ನಿರ್ಮಿಸುತ್ತಿದೆ ತಿರುಮಲೆಯಲ್ಲಿ ವರ್ಷಪೂರ್ತಿ ಸೇರುವ ಯಾತ್ರಿಕ ಸಂದೋಹದ ಸೇವೆಯಲ್ಲಿ ಪಾಲುಗೊಳ್ಳಲು ಬಕ್ತದಾನಿಗಳಿಗೆ ಇದೊಂದು ಸದವಕಾಶ

## 1 ಮೊದಲ ಅಂತಸ್ತು

ತಿರುಮಲೆಯ ಆಳ್ವಾರ್ ಟ್ಯಾಂಕ್, ಮಂಗಳಬಾವಿ, ಶಂಕುಮಿಟ್ಟ, ಶೇಷಾದ್ರಿನಗರ, ಅಂಜನಾದ್ರಿನಗರ, ಗರುಡಾದ್ರಿನಗರ ಕಾಟೇಜುಗಳಲ್ಲಿ -- (ಸಿ ಹಾಗೂ ಡಿ ಬಾಗಗಳು) (ನೆಲ ಅಂತಸ್ತಿನಲ್ಲಿರುವ ಎ ಹಾಗೂ ಬಿ ಬಾಗಗಳಲ್ಲಿ ಮೇಲೆ) -- ೨೦೦ ಮೊದಲ ಅಂತಸ್ತು ಕಾಟೇಜುಗಳನ್ನು ನಿರ್ಮಿಸುವ ಯೋಜನೆಯನ್ನು ಕೈಗೆತ್ತಿಕೊಳ್ಳಲಾಗಿದ್ದು ಎ ಟಿಸಿ., ಎಂ ಬಿ ಸಿ., ಎಸ್ ಎಂ.ಸಿ , ಎಸ್ ಎನ್ ಸಿ , ಗಳಲ್ಲಿ ನೂರು ಕಾಟೇಜುಗಳ ಮೊದಲ ಅಂತಸ್ತು ನಿರ್ಮಾಣ ಪೂರ್ತಿಯಾಗಿ, ದಾನಿಗಳಿಗೆ ನೀಡಲಾಗಿದೆ ಎ ಎನ್.ಸಿ., ಜಿ ಎನ್ ಸಿ ಗಳಲ್ಲಿನ ನೂರು ಮೊದಲ ಅಂತಸ್ತು ಕಾಟೇಜುಗಳು ನಿರ್ಮಾಣ ಪೂರ್ಣಗೊಳ್ಳುವ ಹಂತದಲ್ಲಿವೆ ಇವು ತಿರುಮಲೆಯ ಟಿ ಬಿ ಶಂಕು, ಚಕ್ರ, ನಾಮಗಳ ಬಳಿಯಿವೆ ನೆಲ ಅಂತಸ್ತಿನ ಎ ಹಾಗೂ ಬಿ ಕಾಟೇಜುಗಳು, ಮೇಲೆ ಸಿ ಹಾಗೂ ಡಿ ಕಾಟೇಜುಗಳು ಪ್ರತಿಯೊಂದೂ ಎರಡು ಕೋಣೆಗಳನ್ನು ಹೊಂದಿ (೯೭೨ ಚದರಡಿ ಹಾಗೂ ೧೧೧೨ ಚದರಡಿ) ಸ್ನಾನ ಶೌಚಗೃಹಗಳನ್ನೊಳಗೊಂಡಿರುತ್ತವೆ

ರೂ ೧೫ ಲಕ್ಷ ರೂಗಳನ್ನು ನೀಡುವುದರಿಂದ ದಾನಿಯು ಒಂದು ಮೊದಲ ಅಂತಸ್ತಿನ ಕಾಟೇಜುಗಳನ್ನು ತಮ್ಮ (ತಮ್ಮ ಸಂಸ್ಥೆ, ಟ್ರಸ್ಟ್, ಕಂಪನಿ) ಹೆಸರಿನಲ್ಲಿ ದಾನ ಮಾಡಬಹುದು

## ರಾಮಬಗೀಚ ಅತಿಥಿ ಗೃಹಗಳು

ಪ್ರತಿಯೊಂದು ಅಂತಸ್ತಿನಲ್ಲೂ ೫೦ ಸೂಟ್‌ಗಳಂತೆ ಮೂರು ಅಂತಸ್ತುಗಳಲ್ಲಿ ಒಟ್ಟು ೧೫೦ ಸೂಟ್‌ಗಳಿರುವ ಮೂರು ಅತಿಥಿಗೃಹಗಳನ್ನು ನಿರ್ಮಿಸಲು ಯೋಜಿಸಲಾಗಿದ್ದು ಅತಿಥಿಗೃಹ ೧ ರಲ್ಲಿ ೧೦೮ ಸೂಟ್‌ಗಳನ್ನು ನಿರ್ಮಿಸಿ ದಾನಿಗಳಿಗೆ ನೀಡಲಾಗಿದೆ ಅತಿಥಿಗೃಹ ೨ ರಲ್ಲಿ ೧೫೦ ಸೂಟ್‌ಗಳನ್ನು ನಿರ್ಮಿಸಿ ೫೮ ಸೂಟ್‌ಗಳನ್ನು ದಾನಿಗಳಿಗೆ ನೀಡಲಾಗಿದೆ ಇಲ್ಲಿನ ಮಿಕ್ಕ ೯೨ ಸೂಟ್‌ಗಳೇ ಅಲ್ಲದೆ ಅತಿಥಿಗೃಹ -- ೩ ರಲ್ಲಿನ ೧೫೦ ಸೂಟ್‌ಗಳು ನಿರ್ಮಾಣದ ಕೊನೆಯ ಹಂತದಲ್ಲಿವೆ

ಈ ಮೂರು ಅತಿಥಿಗೃಹಗಳು ದೇವಾಲಯದ ಎದುರಿಗೆ ಅರ್ಧ ಫರ್ಲಾಂಗ್ ದೂರದಲ್ಲಿ ಬೇಡಿ ಆಂಜನೇಯಸ್ವಾಮಿ ದೇವಾಲಯದ ಹಿಂಬಾಗದಲ್ಲಿ ನೂತನ ಆಸ್ಥಾನ ಮಂಟಪದ ಪಕ್ಕದಲ್ಲಿವೆ ಪ್ರತಿ ಸೂಟ್‌ನ ಪ್ಲಿಂತ್ ಏರಿಯಾ ೪೪.೫ ಚದರಮೀಟರ್ ಆಗಿದ್ದು (ಸ್ನಾನ ಶೌಚಗೃಹಗಳೊಡನೆ), ಸಾಮಾನ್ಯ ಅಂಗಳವಿದೆ

ರೂ ೬೦,೦೦೦ ಮೊತ್ತದ ದಾನದಿಂದ ಒಂದು ಸೂಟ್ ಅನ್ನು ದಾನಿಗಳು ತಮ್ಮ ತಮ್ಮ ಹೆಸರಿನಲ್ಲಿ ನೀಡಬಹುದು

## ೩ ಸಪ್ತಗಿರಿ ಸತ್ರಗಳು

ಒಂದು ಕೇಂದ್ರ ವಿಬಾಗದ ಸುತ್ತ ೯ ವಿಭಾಗಗಳಿರುವಂತಹ ಒಂದು ಮಹತ್ ಯೋಜನೆಯನ್ನು ತಿ ತಿ ದೇ ಆರಂಭಿಸಿದೆ ೧ ಹಾಗೂ ೯ ನೇ ವಿಬಾಗಗಳು ಪ್ರವೇಶ ಹಾಗೂ ಉಪಹಾರಗೃಹಗಳಿಗಾಗಿ ಕೇಂದ್ರ ವಿಭಾಗವು ಅಷ್ಟ ಮುಖಗಳ ಅಂಗಳವನ್ನು ಹೊಂದಿದ್ದು ಎಂಟು ಮುಖಗಳಲ್ಲೂ ಒಂದೊಂದು ವಿಬಾಗ ನಿರ್ಮಾಣವಾಗುವುದು ಯಾವುದೇ ವಿಭಾಗಕ್ಕೂ ೧ನೇ ವಿಭಾಗದಿಂದ ಪ್ರವೇಶ ಮಿಕ್ಕ ವಿಬಾಗಗಳು -- ೨ ರಿಂದ ೮ (ಒಟ್ಟು ೭ ವಿಬಾಗ)-- ೯೫೪ ಕೋಣೆಗಳನ್ನು ಹೊಂದಿದ್ದು ೧೧ ಕೋಣೆಗಳು ಆಡಳಿತ ನಿರ್ವಹಣೆಗಾಗಿದ್ದು ಮಿಕ್ಕ ೯೪೩ ಕೋಣೆಗಳನ್ನು ಯಾರಿಕರಿಗೆ ನೀಡಲಾಗುವುದು ಮೊದಲ ಹಂತದಲ್ಲಿ ೨ ಹಾಗೂ ೩ನೇ ವಿಭಾಗಗಳ (೧೦೮ + ೧೪೯) ೨೫೭ ಕೋಣೆಗಳ ನಿರ್ಮಾಣವನ್ನು ಕೈಗೆತ್ತಿಕೊಂಡು ಪೂರ್ಣಗೊಳಿಸುವ ಹಂತದಲ್ಲಿದೆ ಪ್ರತಿ ಕೋಣೆಯ ವಿಸ್ತೀರ್ಣ (ಸ್ನಾನ ಶೌಚಗಳೊಂದಿಗೆ) ೧೨'+೧೪' ರೂ ೪೦,೦೦೦ ಗಳ ದಾನದಿಂದ ದಾನಿಯು ತಮ್ಮ ಹೆಸರಿನಲ್ಲಿ ಕೋಣೆಯನ್ನು ನೀಡಬಹುದು ಈ ವರೆಗೆ ೮೦ ಕೋಣೆಗಳಿಗಾಗಿ ಆಂಶಿಕ ಹಾಗೂ ಪೂರ್ಣ ದಾನಗಳನ್ನು ಸ್ವೀಕರಿಸಲಾಗಿದೆ ಎರಡನೇ ವಿಭಾಗದ ಶೀಘ್ರ ಪೂರ್ಣತೆಯ ಬಳಿಕ ಅದನ್ನು ನೀಡಲಾಗುವುದು

## ೪ ಶೇಷಾದ್ರಿನಗರ ಅತಿಥಿಗೃಹ2 :

ಎರಡಂತಸ್ತಿನ ಈ ಅತಿಥಿಗೃಹದಲ್ಲಿ ೨೬ ಸೂಟ್‌ಗಳಿದ್ದು (ಪ್ರತಿ ಅಂತಸ್ತಿಗೆ ೧೩ ಸೂಟ್‌ಗಳು) ಯಾತ್ರಿಕರಿಗೆ ಬಾಡಿಗೆಯ ಮೇಲೆ ನೀಡಲಾಗುತ್ತದೆ ಪ್ರತಿ ಸೂಟ್ ೪.೨ ಮೀ X ೪.೨ ಮೀ ಇರುತ್ತದೆ

ಇಡೀ ಅತಿಥಿಗೃಹಕ್ಕಾಗಿ ಅಥವಾ ಪ್ರತಿ ಅಂತಸ್ತಿಗಾಗಿ ದಾನಗಳಿಗೆ ಆದ್ಯತೆ ನೀಡಲಾಗುವುದು

೨೫ ಲಕ್ಷ ರೂಗಳ ದಾನದಿಂದ ವ್ಯಕ್ತಿ, ವ್ಯಕ್ತಿಗಳು ಸಂಸ್ಥೆ, ಕಂಪನಿ, ಟ್ರಸ್ಟ್ ಇಡೀ ಅತಿಥಿಗೃಹದ ದಾನಿಗಳಾಗಲು ಸಾಧ್ಯ

ದಾನಿಗಳಿಗೆ ಸೌಲಭ್ಯಗಳು --- ದಾನಿಗಳು ತಮ್ಮ ಜೀವನಾವಧಿಯಲ್ಲೂ, ಕಂಪನಿ, ಇತ್ಯಾದಿಗಳು ೧೫ ವರ್ಷಗಳೂ ವರ್ಷಕ್ಕೆ ೩೦ ದಿನ (ಒಮ್ಮೆ ೧೦ ದಿನಗಳಿಗೆ ಮೀರದಂತೆ) ತಮ್ಮ ದಾನದ ಕಾಟೇಜು, ಸೂಟು, ಕೋಣೆಗಳಲ್ಲಿ ನಾಮಮಾತ್ರಸೇವಾ ಶುಲ್ಕದಿಂದ ಇರಬಹುದು ದಾನಿಗಳ ಹೆಸರು ವಿಳಾಸಗಳನ್ನು ಶಿಲಾಫಲಕದಲ್ಲಿ ಕೆತ್ತಿಸಿ ದಾನದ ಕೊರಡಿ, ಸೂಟ್‌ಗಳಲ್ಲಿ ಪ್ರದರ್ಶಿಸಲಾಗಿರುವುದು

ಮಿಕ್ಕ ವಿವರಗಳಿಗಾಗಿ ಕೂಡಲೇ ಬರೆಯಿರಿ **ಕಾರ್ಯನಿರ್ವಹಣಾಧಿಕಾರಿ,** ತಿ ತಿ ದೇ ತಿರುಪತಿ

# ಶ್ರೀ ಮುತ್ತುಸ್ವಾಮಿ ದೀಕ್ಷಿತರ ನವಾವರಣ ಕೀರ್ತನೆಗಳು ಮತ್ತು ಶ್ರೀಚಕ್ರ

---ಡಾ ವಿ ಎಸ್. ಸಂಪತ್ಕುಮಾರಾಚಾರ್ಯ.

ಮುತ್ತುಸ್ವಾಮಿದೀಕ್ಷಿತರು (1775 -- 1835 ಕ್ರಿ ಶ) ಕರ್ನಾಟಕ ಸಂಗೀತದ ಮುಮ್ಮಣಿಗಳಲ್ಲಿ ಕಿರಿಯರು ಇವರು ಸಂಗೀತ ಮತ್ತು ವೈದಿಕ ವಿದ್ವಾಂಸ ತರ ಮನೆತನಕ್ಕೆ ಸೇರಿದವರು ಕಾವ್ಯ ಅಲಂಕಾರ, ನಾಟಕ, ಜ್ಯೋತಿಷ್ಯ ವೈದ್ಯ ಮತ್ತು ತಂತ್ರ ಶಾಸ್ತ್ರಗಳ ಕ್ರಮಾಂತ ಅಧ್ಯಯನ ಮಾಡಿ ಸಂಗೀತ ಶಾಸ್ತ್ರ ಮತ್ತು ಪ್ರಯೋಗಗಳಲ್ಲಿ ಶಿಕ್ಷಣ ಪಡೆದು ಮಹಾವಿದ್ವಾಂಸರಾಗಿದ್ದರು ಇವರು ಅತಿ ಹೆಚ್ಚಿನ ಸಂಖ್ಯೆಯಲ್ಲಿ ಸಂಸ್ಕೃತದಲ್ಲಿ ಕೃತಿಗಳನ್ನು ರಚಿಸಿರುವ ವಾಗ್ಗೇಯಕಾರರು ಇವರ ರಚನೆಗಳು ನೂರಾರು ಇವೆ ಇವರು ಅತ್ಯಂತ ಹೆಚ್ಚು ಸಂಖ್ಯೆಯಲ್ಲಿ ಸಮುದಾಯ ಕೃತಿಗಳನ್ನು ರಚಿಸಿದ್ದಾರೆ ಇವುಗಳಲ್ಲಿ ಒಂದು ನವಾವರಣ ಕೃತಿಗುಚ್ಛ

ನವಾವರಣ ಕೀರ್ತನೆಗಳೆಲ್ಲವೂ ಕಮಲಾಂಬಾ ದೇವಿಯನ್ನು ಕುರಿತು ರಚಿಸಿರುವಸ್ತೋತ್ರಗಳು ರಾಗದ ದೃಷ್ಟಿಯಿಂದ ಇವುನಾದಾಲಯಗಳು ಇವುಗಳ ಸಾಹಿತ್ಯದಲ್ಲಿ ತಂತ್ರಗಳು, ದೇವೀಪೂಜಾ ವಿಧಿ ಮುಂತಾದುವನ್ನು ವಿಸ್ತಾರವಾಗಿ ಕೊಡಲಾಗಿದೆ ದೇವಿಯ ಸಾಮೀಪ್ಯವನ್ನು ಪಡೆಯಬೇಕಾದರೆ ಒಂಭತ್ತು ಆವರಣಗಳು ಅಥವಾ ಪ್ರಾಕಾರಗಳನ್ನು ದಾಟಿಹೋಗಬೇಕು ಒಂದೊಂದು ಪೂಜಾ ವಿದಿಗೂ ಪ್ರತ್ಯೇಕವಾದ ಹೆಸರು ಮತ್ತು ಶಕ್ತಿಗಳಿವೆ ಈ ಪರಿಷ್ಕಾರವಾದ ಪೂಜೆಗೆ ನವಾವರಣ ಪೂಜೆ ಎಂದು ಹೆಸರು ಈ ಒಂಭತ್ತು ರಚನೆಗಳು ಒಂಬತ್ತು ಆವರಣಗಳಲ್ಲಿ ದೇವೀಪೂಜೆಗಾಗಿ ರಚಿಸಲ್ಪಟ್ಟಿವೆ ಧ್ಯಾನಕೀರ್ತನೆ ಮತ್ತು ಕೊನೆಯಲ್ಲಿರುವ ಮಂಗಳಾಚರಣದ ಕೀರ್ತನೆಯೂ ನವಾವರಣಕೃತಿ ಗುಚ್ಛಕ್ಕೆ ಸೇರಿವೆ

## ಶ್ರೀಚಕ್ರ :

ಭಗವಂತನು ಅಸಂಖ್ಯಾತರೂಪದಲ್ಲಿರುತ್ತಾನೆ ಎಂದು ಶ್ವೇತಾಶ್ವತರ ಉಪನಿಷತ್ತು ಹೇಳಿದೆ ಪುರುಷನ ಶಕ್ತಿ, ಸ್ತ್ರೀಯ ಲಾವಣ್ಯ ತರುಣರಸಂತೋಷ, ವೃದ್ಧರ ವಿವೇಕ --ಇವೆಲ್ಲವೂ ದೈವೀಶಕ್ತಿಯ ವಿವಿದ ರೂಪಗಳೇ ಆಗಿವೆ ಇಷ್ಟೇ ಅಲ್ಲ, ಭಗವಂತನ ಶಕ್ತಿಯಿಂದ ಎಲ್ಲವೂ ಸೃಷ್ಟಿಸಲ್ಪಡುತ್ತವೆ ಅದೇ ಸ್ಥಿತಿ ಮತ್ತು ಲಯಕ್ಕೆ ಕಾರಣ ಈ ಶಕ್ತಿಯೂ, ಶಕ್ತಿಯುಳ್ಳವನೂ ಬೇರೆ ಬೇರೆಯಲ್ಲ ಎರಡೂ ಒಂದೇ ಭಗವಂತನನ್ನು ಅನೇಕವೇಳೆ ತಾಯಿಯೆಂದು ಭಾವಿಸಲಾಗಿದೆ ಇದು ಬಹುಪ್ರಾಚೀನವಾದ ಭಾವನೆ ಶಕ್ತಿಯು ಸ್ವರ್ಗದಲ್ಲಿದ್ದು ಭೂಮಿಯನ್ನು ಕಾಪಾಡುತ್ತಾಳೆ ಎಂದು ಋಗ್ವೇದದ ಒಂದು ಋಕ್ ಹೇಳುತ್ತದೆ ನಿನ್ನ ತಾಯಿಯನ್ನು ದೇವಿಯೆಂದು ಕಾಣು ಎಂದು ತೈತ್ತಿರೀಯ ಉಪನಿಷತ್ತು ಹೇಳುತ್ತದೆ ಹಲವು ಉಪನಿಷತ್ತುಗಳು ಶಕ್ತಿಯನ್ನು ಬ್ರಹ್ಮವಸ್ತುವೆಂದು ಸಾರಿವೆ ಈ ಶಕ್ತಿ ತತ್ತ್ವವು ಹಿಂದುಗಳ ಆಧ್ಯಾತ್ಮಿಕ ಪುನರುತ್ಥಾನಕ್ಕೆ ಕಾರಣವಾದ ಒಂದು ಮೂಲ ಶಕ್ತಿಯಾಗಿದೆ

ಭಕ್ತಿಯು ಮೂರು ರೂಪುಗಳನ್ನು ಹೊಂದಿದೆ ಇವು ಒಂದಕ್ಕೊಂದು ವಿರೋಧವಲ್ಲ ಒಂದಕ್ಕೊಂದು ಪೂರಕ ದೇವರ ಮೂರ್ತಿ ಪೂಜೆ -- ಇದು ಕಾಯಾ, ಮತ್ತೊಂದು ಮಂತ್ರ -- ಇದು ವಾಚ, ಮೂರನೆಯದು ಮಾನಸಿಕ ಭಾರತದಲ್ಲಿ ಈ ಮೂರು ವಿಧಗಳನ್ನು ಕೂಲಂಕಷವಾಗಿ ಪರಿಶೀಲಿಸಿದ್ದಾರೆ ಇವೇ ವಿಗ್ರಹಾರಾದನೆ, ಪ್ರಾರ್ಥನೆ ಮತ್ತು ಧ್ಯಾನ ವಿಗ್ರಹಗಳು ವ್ಯಕ್ತ, ಯಂತ್ರಗಳು ಅವ್ಯಕ್ತ ಮಂತ್ರಗಳೇ ದೇವತೆಗಳೆಂದು ಭಾವಿಸಲಾಗಿದೆ ಇವುಗಳಲ್ಲಿ ಮಾನಸಿಕವಾದುದೇ ಅತ್ಯಂತ ಶ್ರೇಷ್ಠವೆಂದು ಪರಿಗಣಿಸಲಾಗಿದೆ

ಪೂಜಾವಸ್ತುವಿನ ಪ್ರತೀಕವೇ ಯಂತ್ರ ಮಂತ್ರವೂ ಸೇರಿ ಅದು ಸಂಪೂರ್ಣ ತಂತ್ರವು ಅದರ ವಿಸ್ತಾರ ಮತ್ತು ವಿವರಣೆಯಿಂದ ಕೂಡಿದ ರಕ್ಷಣೆ ತಂತ್ರವು ವಿವರವಾಗಿ ಬ್ರಹ್ಮತತ್ವವನ್ನೂ ಮತ್ತು ಮಂತ್ರವನ್ನೂ ವಿವರಿಸಿ ರಕ್ಷಿಸುತ್ತದೆ ಆದ್ದರಿಂದಲೇ ಅದಕ್ಕೆ ತಂತ್ರವೆಂದು ಹೆಸರು ತಂತ್ರದ ಕೆಲವು ಬಾಗಗಳು ಗುಪ್ತ ವಿದ್ಯೆಯಾಗಿವೆ ಅವುಗಳನ್ನು ಕೇವಲ ಪುಸ್ತಕಗಳ ಅಧ್ಯಯನದಿಂದ ಕಲಿಯಲಾಗುವುದಿಲ್ಲ ಅದನ್ನು ಯೋಗ್ಯರಾದ ಗುರುಗಳಿಂದ ತಿಳಿಯಬೇಕು

ಶಕ್ತಿಯು ಸಾಂಜ್ಞಿಕವಾಗಿ ಸ್ತ್ರೀ ಆದರೂ, ಅದು ವಾಸ್ತವವಾಗಿ ಪುರುಷನೂ ಅಲ್ಲ, ಸ್ತ್ರೀಯೂ ಅಲ್ಲ ನಾನಾ ರೂಪದಲ್ಲಿ ಪ್ರಕಟವಾಗುವ ಒಂದು ಶಕ್ತಿ ಭೂಮಿ, ನೀರು, ಅಗ್ನಿ, ವಾಯು, ವಿದ್ಯುತ್ ಮುಂತಾದವು ಅವಳ ಸ್ವರೂಪ -- ಅಪರ ಪ್ರಕೃತಿ ಜೀವವೇ ಅವಳ ಪರಪ್ರಕೃತಿ ಮನಸ್ಸು ಅವಳ ಚಿತ್ ಶಕ್ತಿಯ ರೂಪ, ನಾವು ಈ ಪ್ರಪಂಚದಲ್ಲಿ ಉಜ್ಜೀವಿಸಿರುವುದು ಶಕ್ತಿಯಿಂದ ಮಗುವಿನ ಎಲ್ಲಾ ಅವಶ್ಯಕತೆಗಳನ್ನು ತಾಯಿಯು ಪೂರೈಸುತ್ತಾಳೆ ಮಗುವಿನ ಬೆಳವಣಿಗೆ, ಪೋಷಣೆ ಎಲ್ಲವೂ ತಾಯಿಯನ್ನು ಅವಲಂಬಿಸಿದೆ ಅಂತೆಯೇ ಇಡೀ ವಿಶ್ವದ ಜೀವನ ಮತ್ತು ಅದರ ಅವಶ್ಯಕತೆ, ಅದಕ್ಕೆ ಬೇಕಾದ್ದೆಲ್ಲವೂ ಶಕ್ತಿಯನ್ನು ಎಂದರೆ ವಿಶ್ವ ಜನನಿಯನ್ನು ಅವಲಂಬಿಸಿದೆ ಆ ಜನನಿಯನ್ನು ಪೂಜಿಸಿದರೆ ನಾವು ಪ್ರಕೃತಿಯನ್ನು ಮೀರಿ, ಅವಳ ಕರುಣಾಪೂರಿತವಾದ ಅನುಗ್ರಹದಿಂದ, ಮಾರ್ಗದಲ್ಲಿ ಬರುವ ಎಲ್ಲಾ ತಡೆಗಳೂ ನಾಶವಾಗಿ, ಸಂಸಾರದಿಂದ ವಿಮುಕ್ತವಾಗಿ ಮೋಕ್ಷ ಪಡೆಯಬಹುದು

ವಿಶ್ವಜನನಿಯು ಶಿವಶಕ್ತಿ ರಾಧಾ, ದುರ್ಗಾ, ಲಕ್ಷ್ಮಿ, ಸರಸ್ವತೀ, ಸಾವಿತ್ರಿ --ಇವು ದೇವಿಯ ಪ್ರಮುಖ ಸ್ವರೂಪಗಳು ನಾವ, ಬಿಂದು ಇವು ಶಕ್ತಿಯ ವಿವಿಧ ಅವಲೋಕನದ ಹೆಸರುಗಳು ನಾದವು ಶಿವಶಕ್ತಿ ಶಿವನ ಒಂದು ನೋಟ ಸತ್ -- ಚಿತ್ ಆನಂದ ಮತ್ತೊಂದು ಶಿವತತ್ವ ಶಿವತತ್ವಮತ್ತು ಶಕ್ತಿ ತತ್ವಗಳು ಯಾವಾಗಲೂ ಪ್ರತ್ಯೇಕವಾಗುವುದಿಲ್ಲ ಶಕ್ತಿಯು ಚಿದ್ರೂಪಿಣಿ ಅವಳು ಪ್ರಕೃತಿಯ ಮಾತೆ ಅವಳೇ ಪ್ರಕೃತಿ ಅವಳು ಪರವಸ್ತು ಲೀಲೆಯನ್ನು ನಡೆಸುತ್ತಾಳೆ ಅವಳು ಜಗಜ್ಜನನಿ, ಮಹಿಷಾಸುರಮರ್ದಿನಿ, ಭ್ರಾಂತಿನಾಶಿನಿ, ದಾರಿದ್ರ್ಯನಾಶಿನಿ ಅವಳು ಪ್ರಕೃತಿ, ಮಾಯಾ, ಮಹಾಮಾಯಾ, ಶ್ರೀವಿದ್ಯಾ ಲಲಿತಾ, ಕುಂಡಲಿನಿ, ರಾಜರಾಜೇಶ್ವರೀ, ತ್ರಿಪುರಸುಂದರೀ ಅವಳು ಇಚ್ಛಾಶಕ್ತಿ, ಕ್ರಿಯಾಶಕ್ತಿ ಮತ್ತು ಜ್ಞಾನ ಶಕ್ತಿಯಾಗಿ ಪ್ರಕಟಗೊಳ್ಳುತ್ತಾಳೆ ಅವಳು ಸರಸ್ವತೀ (ಬ್ರಹ್ಮಶಕ್ತಿ), ಲಕ್ಷ್ಮಿ (ವಿಷ್ಣುಶಕ್ತಿ) ಮತ್ತು ಗೌರೀ (ಶಿವ ಶಕ್ತಿ) ಆದ್ದರಿಂದ ಅವಳಿಗೆ ತ್ರಿಪುರಸುಂದರೀ ಎಂದು ಹೆಸರು

ವಿಶ್ವಜನನಿಯಾದ ತ್ರಿಪುರಸುಂದರಿಯ ನಿವಾಸವು ಶ್ರೀನಗರ. ಇದು 25 ತತ್ವಗಳ ಸೂಚಕವಾದ 25 ಕೋಟೆಗಳನ್ನು ಒಳಗೊಂಡಿದೆ ಅದ್ಭುತವಾದ

ಚಿಂತಾಮಣಿ ಅರಮನೆಯು ಮದ್ಯದಲ್ಲಿದೆ ಈ ಅರಮನೆಯಲ್ಲಿ ಶ್ರೀಚಕ್ರದ ಬಿಂದು ಪೀಠದಲ್ಲಿ ಜಗಜ್ಜನನಿಯು ಉಪಸ್ಥಿತಳಾಗಿದ್ದಾಳೆ ಇಡೀ ವಿಶ್ವವೇ ಅವಳ ದೇಹ ಪರ್ವತಗಳು ಆ ದೇಹದ ಮೂಳೆಗಳು, ನದಿಗಳು ನರನಾಡಿಗಳು ಸೂರ್ಯ, ಚಂದ್ರರೇ ಕಣ್ಣುಗಳು ವಾಯುವೇ ಅವಳ ಉಸಿರು ಅಗ್ನಿಯೇ ಅವಳ ಮುಖ

ಭಗವಂತನನ್ನು ಶ್ರೀಮಾತೆಯೆಂದು ಭಾವಿಸಿ ಪೂಜಿಸುವುದು ಮಾತೃಪೂಜೆ ಶಕ್ತಿಯು ಭಗವಂತನ ವಿಶ್ವಕ್ರಿಯಾಶಕ್ತಿ ಈಶ್ವರನ ಶಕ್ತಿ ಅಗ್ನಿಯಿಂದ ಶಾಖವನ್ನು ಪ್ರತ್ಯೇಕಿಸಲು ಸಾಧ್ಯವಿಲ್ಲ ಶಕ್ತಿ ಮತ್ತು ಶಕ್ತ ಒಂದೇ ದೇವಿಯನ್ನು ನವರಾತ್ರಿಕಾಲದಲ್ಲಿ ದುರ್ಗಾ, ಸರಸ್ವತೀ, ಲಕ್ಷ್ಮೀ ಎಂದು ಪೂಜಿಸುತ್ತಾರೆ ಈ ಒಂಬತ್ತು ದಿನ -- ರಾತ್ರಿಗಳು ದೇವೀಪೂಜೆಗೆ ಬಹಳ ಪ್ರಶಸ್ತವಾದುವು. ಬಂಡಾಸುರ ಮತ್ತು ಅವನ ಸೈನ್ಯದೊಡನೆ ದೇವಿಯು ಒಂಭತ್ತು ದಿವಸಗಳ ಕಾಲ ಯುದ್ಧಮಾಡಿ ಹತ್ತನೆಯ ದಿನ ಸಂಜೆ ವಿಜಯವನ್ನು ಪಡೆದಳು ಆ ದಿನವೇ ವಿಜಯದಶಮಿ ವಿಜಯದಶಮಿಯಂದು ಮಕ್ಕಳಿಗೆ ಅಕ್ಷರಾಭ್ಯಾಸಮಾಡಿಸುತ್ತಾರೆ ವಿದ್ಯಾಭ್ಯಾಸಕ್ಕೆ ಪ್ರಶಸ್ತವಾದ ದಿನ ಇದು ಕುರುಕ್ಷೇತ್ರಯುದ್ಧಕ್ಕೆ ಹೋಗುವಮುನ್ನ ಅರ್ಜುನನು ದೇವಿಯನ್ನು ಪೂಜಿಸಿದ ದಿನ

ಯಂತ್ರಗಳನ್ನು ಪೂಜಿಸುವುದು ವ್ಯಾಪಕವಾಗಿದೆ ವಿಗ್ರಹಗಳಿದ್ದರೂ, ಒಂದು ಯಂತ್ರದ ಮೇಲೆ ಅವುಗಳನ್ನು ಇಟ್ಟು ಪೂಜಿಸುವುದು ರೂಢಿಯಲ್ಲಿದೆ

ಶ್ರೀಚಕ್ರಕ್ಕೆ ಬಿಂದು ಮಂಡಲವೆಂದು ಹೆಸರು ಇದು ಶಕ್ತಿ ಸಮೂಹ ಮತ್ತು ಸಂಕೇತ, ಬಿಂದುವು ಈ ಮಂಡಲದ ಮೂಲ ಮಂಡಲದ ಶಕ್ತಿಯಲ್ಲವೂ ಇಲ್ಲೇ ಕೇಂದ್ರೀಕೃತವಾಗಿದೆ ಬಿಂದುವು ಶಕ್ತಿ ಬೀಜ ಇದು ಎಲ್ಲ ಶಕ್ತಿಗಳ ಕೇಂದ್ರವಾಗಿರುವಂತೆಯೇ ಆಂತರಿಕ ಶಕ್ತಿಗಳ ಉದ್ಭವಸ್ಥಾನವಾಗಿದೆ ಶ್ರೀಚಕ್ರವು ಶ್ರೀಮಾತೆಯ ಶರೀರವೆಂದು ಭಾವಿಸಲಾಗಿದೆ ಶ್ರೀಮಾತೆಯು ದೇವೀ, ತ್ರಿಪುರಸುಂದರೀ, ಲಲಿತಾ, ರಾಜರಾಜೇಶ್ವರೀ ಮತ್ತು ಪರಮ ಭಟ್ಟಾರಿಕಾ ಎಂಬ ಹೆಸರುಗಳಿರುವವಳು ಈ ಚಕ್ರವು ದೇವಿಯ ಆಸ್ಥಾನವನ್ನು ನಿರೂಪಿಸುತ್ತದೆ ಅವಳ ದಾಸದಾಸಿಯರು, ಸಹಾಯಕರು, ಕೋಟೆಗಳು, ಭವನಗಳು, ಪ್ರವೇಶದ್ವಾರಗಳು ಎಲ್ಲವನ್ನೂ ಇದು ಒಳಗೊಂಡಿದೆ ಶ್ರೀಮಾತೆಯು ಕೇಂದ್ರಬಿಂದುವಿನಲ್ಲಿ ನಾಲ್ಕು ಕಾಲುಗಳುಳ್ಳ ಮಂಚದಮೇಲೆ ಉಪಸ್ಥಿತಳಾಗಿದ್ದಾಳೆ ಈ ನಾಲ್ಕು ಕಾಲುಗಳ ದೇವತೆಗಳು ಯಾರೆಂದರೆ ಸಕಲಸೃಷ್ಟಿಗೆ ಬಾಧ್ಯನಾದ, ಈಶಾನ್ಯದಲ್ಲಿರುವ ಬ್ರಹ್ಮ ಸ್ಥಿತಿಗೆ ಕಾರಣನಾದ ಆಗ್ನೇಯದಲ್ಲಿರುವ ವಿಷ್ಣು, ನೈಋತ್ಯದಲ್ಲಿ ಸಂಹಾರಕ್ಕೆ ಕಾರಣನಾದ ರುದ್ರ, ವಾಯುವ್ಯದಲ್ಲಿ ಉಪಸಂಹಾರಕ್ಕೆ ಕಾರಣನಾದ ಈಶಾನ ಮಂಚದ ಹಲಗೆಯು ಅವಳ ಅನುಗ್ರಹವನ್ನು ಸೂಚಿಸುತ್ತದೆ ಈ ಪಂಚತತ್ವಗಳು ಅವಳ ಪಂಚವಿಧ ಚಟುವಟಿಕೆಗಳಾಗಿವೆ ಅವಳೇ ಜೀವದಾತೆ ಅವಳಿಲ್ಲದೆ ಶಿವನು ಇಲ್ಲ ಅವಳ ಶಕ್ತಿಯಿಂದಲೇ ಶಿವನು ವಿಶ್ವಸೃಷ್ಟಿ ಮಾಡುತ್ತಾನೆ ಅವಳ ಪ್ರಚೋದನೆಯಿಲ್ಲದೆ ಅವನು ಏನೂ ಮಾಡಲಾರ ಅವಳೊಂದಿಗೆ ಸೇರಿ ಅವನು ಕಾಮೇಶ್ವರನಾಗುತ್ತಾನೆ

ಕೇಂದ್ರಬಿಂದುವು ಪುರುಷ ಮತ್ತು ಪ್ರಕೃತಿಯ ಸಂಯೋಗ ಪುರುಷನು ಶಿವ, ಪ್ರಕೃತಿಯು ಶಿವಶಕ್ತಿ, ಶ್ರೀಚಕ್ರವು ಶಿವಶಕ್ತಿ ಸಮಾಯೋಗದ ಪ್ರತೀಕ ಅಗ್ರ ಊರ್ಧ್ವವಾಗಿರುವ ತ್ರಿಕೋನವು ಪುರುಷ, ಅಗ್ರವು ಕೆಳಮುಖವಾಗಿರುವ ತ್ರಿಕೋನವು ಪ್ರಕೃತಿ ಮೊದಲನೆಯದು ಶಿವಚಕ್ರ ಮತ್ತು ಎರಡನೆಯದು ಶಕ್ತಿಚಕ್ರ

ಶ್ರೀಚಕ್ರವು ನವತ್ರಿಕೋನಗಳು ಪರಸ್ಪರ ಹೆಣೆದುಕೊಂಡಿರುವ ಒಂದು ಪಡಿಕಟ್ಟು, ಇವುಗಳಲ್ಲಿ ನಾಲ್ಕು ತ್ರಿಕೋನಗಳು ಶಿವಚಕ್ರವನ್ನು ಅಂದರೆ ಬ್ರಹ್ಮ ರುದ್ರ, ಈಶ್ವರ, ಸದಾಶಿವನನ್ನು ಮತ್ತು ಐದು ತ್ರಿಕೋನಗಳು ಶಕ್ತಿಚಕ್ರ ಅಂದರೆ ಶ್ರೀವಿದ್ಯಾ, ತ್ವರಿಕಾ, ಪಾರಿಜಾತೇಶ್ವರೀ, ತ್ರಿಪುರಾ, ಮತ್ತು ಪಂಚಬಾಣೇಶಿಯರನ್ನು ತೋರಿಸುತ್ತವೆ ಆದ್ದರಿಂದ ಶ್ರೀಚಕ್ರಕ್ಕೆ ನವಯೋನಾತ್ಮಕಚಕ್ರ ಎಂದು ಹೆಸರು 3 ಮತ್ತು 9 ಗಮನಾರ್ಹವಾದ ಸಂಖ್ಯೆಗಳು ತ್ರಿಕೋನವಿರುವುದರಿಂದ ಅದು ಸೂಚಿಸುವ ದೇವತೆಯು ತ್ರಿಪುರಾ ತ್ರಿಕೋನವು ಬಿಂದುವಿನ ಒಂದು ಆವಿಷ್ಕಾರವಾಗಿದೆ ಈ ನವತ್ರಿಕೋನಗಳ ಪರಸ್ಪರ ಹೆಣೆದುಕೊಳ್ಳುವಿಕೆಯಿಂದ ಬಿಂದುವೂ ಸೇರಿ 44 ತ್ರಿಕೋನಗಳಾಗುತ್ತವೆ ಬಿಂದುವನ್ನು ಸೇರಿಸಿಕೊಳ್ಳದಿದ್ದರೆ ತ್ರಿಕೋನಗಳ ಸಂಖ್ಯೆ 43 ಈ 44 ಅದವಾ 43 ತ್ರಿಕೋನಗಳ ಸೇರುವಿಕೆಯ ಮಾದರಿಯೇ ಶ್ರೀಚಕ್ರ

ಈ ಪಡಿಕಟ್ಟಿನ ಸುತ್ತಲೂ ಏಕಕೇಂದ್ರವುಳ್ಳ ಎರಡು ವೃತ್ತಗಳಿವೆ ಒಳಭಾಗದಲ್ಲಿರುವುದು ಅಷ್ಟದಳಪದ್ಮ ಹೊರಭಾಗದಲ್ಲಿರುವುದು ಷೋಡಶದಳಪದ್ಮ ಇವುಗಳ ಸುತ್ತಲೂ ಮೂರು ವೃತ್ತಗಳು ಅದವಾ ವಲಯಗಳಿವೆ ಇಡೀ ಮಾದರಿಯು ಒಂದು ಚಚ್ಚೌಕದ ಮದ್ಯದಲ್ಲಿದೆ ಇದಕ್ಕೆ ಅಂಗಳ ಅದವಾ ಭೂಪುರವೆಂದು ಹೆಸರು ಇದು ಮೂರು ಗೆರೆಗಳಿಂದ ಸೂಚಿಸಲ್ಪಟ್ಟಿದೆ ಈ ಚಚ್ಚೌಕದ ಪ್ರತಿಯೊಂದು ಕಡೆ ಒಂದೊಂದು ದ್ವಾರವಿದೆ

ಇದು ಶ್ರೀಚಕ್ರದ ರಚನೆ -- ಒಂಭತ್ತು ತ್ರಿಕೋನಗಳು ಅನುಕ್ರಮವಾಗಿ ನವಾವರಣವಿರುವಂತೆ ಏರ್ಪಡಿಸಿರುವ ರಚನೆ ಈ ನವಾವರಣಗಳನ್ನು ಒಳಭಾಗದಿಂದ ಹೊರಗಡೆಗೆ ಹೀಗೆ ಪರಿಗಣಿಸಲಾಗಿದೆ

1) ಕೇಂದ್ರ -- ಬಿಂದು -- ಇದು ಶಿವಚಕ್ರ. 2) ಮೊದಲನೆಯ ತ್ರಿಕೋನ 3) ಈ ತ್ರಿಕೋನದ ಸುತ್ತಲೂ ಇರುವ 8 ಮೂಲೆಗಳು ಮತ್ತು ಚಕ್ರ ತ್ರಿಕೋನಗಳಿರುವ ವಸುಕೋನ 4) ಇದರ ಸುತ್ತಲೂ 10 ಕೋನಗಳಿರುವ ಭಾಗದಶಕೋನ ಅದವಾ ದಶಾರ (ಅಂತರ್ದಶಾರ) 5) ಇದರ ಸುತ್ತಲೂ 10 ಕೋನಗಳಿರುವ ಬಹಿರ್ದಶಾರ 6) ಇದರ ಸುತ್ತಲೂ 14 ಕೋನಗಳಿರುವ ಚತುರ್ದಶಾರ (2 ರಿಂದ 6 ರವರೆಗೆ ಶಕ್ತಿಚಕ್ರಗಳು) 7) ಇದರ ಸುತ್ತಲೂ 8 ದಳಗಳಿರುವ ವೃತ್ತ -- ಅಷ್ಟದಳ ಪದ್ಮ ಇದು ಶ್ರೀಚಕ್ರದ ಮುಖ್ಯಭಾಗದ ಸುತ್ತಲೂ ಇದೆ 8) ಇದರ ಸುತ್ತಲೂ 16 ದಳಗಳಿರುವ ವೃತ್ತವಿದೆ -- ಷೋಡಶದಳ ಪತ್ರಕ 9) ಇದರ ಸುತಲೂ

ಚೌಕಾಕಾರವುಳ್ಳ ಪ್ರವೇಶವಿದ ಇದು ಚತುರಶ್ರ ಅಥವಾ ಭೂಪುರ ಈ ಮೂರೂ ಮತ್ತು ಕೇಂದ್ರವೂ ಸೇರಿ ನಾಲ್ಕು ಶಿವಚಕ್ರಗಳು

ಒಂದು ಮತದಂತೆ 9 ತ್ರಿಕೋನಗಳಲ್ಲಿ ನಾಲ್ಕು ಶಿವಚಕ್ರಗಳು ಮತ್ತು ಐದು ಶಕ್ತಿ ಚಕ್ರಗಳು ಮತ್ತೊಂದು ಅಭಿಪ್ರಾಯದಂತೆ ಈ ಒಂಬತ್ತು ತ್ರಿಕೋನಗಳೂ ಶಕ್ತಿ ಚಕ್ರಗಳು ಇವು ದೇವಿಯ ರೂಪಗಳಾದ ವಾಮಾ, ಜ್ಯೇಷ್ಠಾ, ರೌದ್ರೀ, ಅಂಬಿಕಾ, ಪರಾಶಕ್ತಿ, ಇಚ್ಛಾ, ಜ್ಞಾನಾ, ಕ್ರಿಯಾ ಮತ್ತು ಶಾಂತಾ -- ಇವುಗಳನ್ನು ನಿರೂಪಿಸುತ್ತವ

ಶಿವ ಮತ್ತು ಶಕ್ತಿಯ ಸಮಾಯೋಗವೇ ಶ್ರೀಚ ಕ್ರದ ಪ್ರಧಾನ ತತ್ವ. ಇದು ಶ್ರೀವಿದ್ಯಾತತ್ವದ ಅಡಿಗಲ್ಲು ಈ ಒಂಬತ್ತು ಚಕ್ರಗಳು ಸೃಷ್ಟಿ, ಸ್ಥಿತಿ ಮತ್ತು ಸಂಹಾರವನ್ನು ಸೂಚಿಸುವ ಪ್ರತಿರೂಪಗಳು ಭೂಪುರ, ಷೋಡಶದಳ ಪದ್ಮ ಮತ್ತು ಅಷ್ಟದಳ ಪದ್ಮ ಸೇರಿ ಒಟ್ಟಾಗಿ ಸೃಷ್ಟಿ ಚಕ್ರದ ಕೇಂದ್ರವೆನಿಸಿದ ಮಧ್ಯದ ಎರಡು ಚಕ್ರಗಳು ಸ್ಥಿತಿ ಚಕ್ರ, ಮೂರು ಒಳಭಾಗದ ಅಷ್ಟಕೋನಗಳಿರುವ ಭಾಗ, ಮುಖ್ಯ ತ್ರಿಕೋನ ಮತ್ತು ಕೇಂದ್ರ ಬಿಂದು ಸೇರಿ ಸಂಹಾರಚಕ್ರ ವಾಗಿದೆ ಮೊದಲ ಕೇಂದ್ರಾಧ್ಯಕ್ಷನು ಸೋಮ, ಎರ ಡನೆಯ ಕೇಂದ್ರಾಧ್ಯಕ್ಷನು ಸೂರ್ಯ ಮತ್ತು ಮೂರ ನೆಯ ಕೇಂದ್ರಾಧಿದೇವತೆಯು ಅಗ್ನಿ

## ನವಾವರಣಗಳು :

ಚಕ್ರರಾಜವೆನಿಸಿಕೊಂಡಿರುವ ಶ್ರೀಚಕ್ರವು ಒಂದು ವಿಸ್ತಾರವಾದ ಸೌಧ ಅದರ ಅಂತರಂಗದ ಕೋಣೆ ಯಲ್ಲಿ ಶ್ರೀಮಾತೆಯು ತನ್ನ ಅದ್ವಿತೀಯ ವೈಭವ ಮತ್ತು ಕೀರ್ತಿಯಿಂದ ಕೂಡಿ ಮಂಡಿಸಿದ್ದಾಳೆ ಎಂದು ಭಾವಿಸಲಾಗಿದೆ ಈ ಸೌಧದ ಪ್ರತಿಯೊಂದು ಆವ ರಣವನ್ನು ದಾಟಿ ನಾವು ದೇವಿಯ ಸನ್ನಿಧಿಯನ್ನು ತಲುಪಬೇಕು ಪ್ರತಿಯೊಂದು ಆವರಣವೂ ದೈವಿಕ ಸಮಕ್ಷತೆಯಿಂದ ತುಂಬಿದೆ ಅದು ಭಕ್ತನ ಮಾರ್ಗಕ್ಕೆ ಬೆಳಕು ಬೀರುತ್ತದೆ ಆದ್ದರಿಂದ ಪ್ರತಿಯೊಂದು ಆವ ರಣವೂ ಶ್ರೀದೇವಿಯ ಸನ್ನಿಧಿಯ ಕಡೆಗೆ ಸಾಗುವ ಒಂದು ಮುಖ್ಯ ಹಂತವೆಂದೂ, ನಮ್ಮ ಆಧ್ಯಾತ್ಮಿಕ ಪ್ರಗತಿಯ ಒಂದು ನಿಲ್ದಾಣವೆಂದೂ ಪರಿಗಣಿಸಲಾ ಗಿದೆ

ಭೂಪುರದಿಂದ ಮೊದಲಾಗಿ ಬಿಂದುವಿನಲ್ಲಿ ಅಂತ್ಯಗೊಳ್ಳುವ ಒಂಭತ್ತು ಆವರಣಗಳಿವೆ ಪ್ರತಿ ಯೊಂದಕ್ಕೂ ಅದರದೇ ಆದ ಹೆಸರು, ರೂಪ ಮತ್ತು ಆಧ್ಯಾತ್ಮಿಕ ಮಹತ್ವ ಮತ್ತು ಸೂಕ್ತವಾದ ವರ್ಣಿಸಿದ ಒಬ್ಬ ಅಧಿದೇವತೆ ಅಥವಾ ಚಕ್ರ ನಾಯಿಕಾ ಅಥವಾ ಚಕ್ರೇಶ್ವರಿಯು ಇರುತ್ತಾಳೆ ಇವಳು ಶ್ರೀಮಾತೆಯ ಪ್ರತಿನಿಧಿ ಒಬ್ಬ ಗುಪ್ತವಾದ ಮುದ್ರಾ ದೇವತೆಯಿದ್ದು ಚಕ್ರವನ್ನು ಸ್ವಾಗತಿಸಿ ಸುಪ್ರೀತಗೊಳಿಸು ತ್ತಾಳೆ ಇವರಲ್ಲದೆ ಶ್ರೀಮಾತೆಯು -- ಮಹಾಚ ತುಃಷಷ್ಠಿ ಯೋಗಿನೀ ಗಣಸೇವಿತಾ -- ಆದರಿಂದ 64 ಕೋಟಿ ಯೋಗಿನಿಯರು ಶ್ರೀಮಾತೆಯ ಪರಿ ವಾರದಲ್ಲಿದ್ದಾರೆ ಆದ್ದರಿಂದ ಶ್ರೀಚಕ್ರವು ಮಹಾ ಶ್ರೀ ತ್ರಿಪುರಾತ್ಮಕವಾದುದು ಚಕ್ರದ ಈ ನವಾ ವರಣವು ಅವಳ ನಿಜಸ್ವರೂಪವನ್ನು ಪ್ರತ್ಯಕ್ಷಿಸುವುದ ರಿಂದ ಪ್ರತಿಯೊಂದು ಆವರಣವನ್ನೂ ಚಕ್ರವು ಪೂಜಿ ಸುತ್ತಾನೆ ಈ ಪೂಜೆಯು ಭೂಪುರದಿಂದ ಆರಂಭ ವಾಗಿ ಬಿಂದುವಿನಲ್ಲಿ ಮುಕ್ತಾಯಗೊಳ್ಳುತ್ತದೆ

## ಮೊದಲನೆಯ ಆವರಣ :

ಇದಕ್ಕೆ ತ್ರೈಲೋಕ್ಯ ಮೋಹನ ಎಂದು ಹೆಸರು ಇದು ಸರ್ವಾಂತ ಚತುರಶ್ರರೂಪವುಳ್ಳದ್ದಾಗಿದ ಇದರ ಮೇಲೆ ಇಡೀ ಚಕ್ರವು ಸ್ಥಾಪಿತವಾಗಿದ ಇದರ ಹೊರ ಅಂಚಿನಲ್ಲಿ ಪ್ರಾಕಾರದಂತೆ ಮೂರು ರೇಖೆ ಗಳಿವೆ ಈ ಚೌಕದ ಪ್ರತಿಯೊಂದು ಕಡೆ ಇರುವ ದ್ವಾರವು ಆಮ್ನಾಯ ಈ ಚೌಕದ ಅತ್ಯಂತ ಹೊರಗಿನ ರೇಖೆಯು ದಶಸಿದ್ಧಿಗಳ ನಿವಾಸವಾ ಗಿದೆ ನಾಲ್ಕು ಸಿದ್ಧಿಗಳು ನಾಲ್ಕು ದ್ವಾರಗಳಲ್ಲೂ, ನಾಲ್ಕು ಸಿದ್ಧಿಗಳು ನಾಲ್ಕು ಮೂಲೆಗಳಲ್ಲೂ, ಒಂದು ಸಿದ್ಧಿಯು ಮೇಲೆ, ಮತ್ತೊಂದು ಕೆಳಗೂ ಇವೆ ಇವು ಅಣಿಮಾ, ಮಹಿಮಾ, ಲಘಿಮಾ, ಗರಿಮಾ, ಈಶಿತ್ವ, ಇಚ್ಛಾ, ವಶಿತ್ವ, ಪ್ರಾಕಾಮ್ಯ ಮತ್ತು ಭುಕ್ತಿಯ ಪ್ರತಿ ರೂಪಗಳು ಸರ್ವಕಾಮ ಸಿದ್ಧಿಯನ್ನು ಪಡೆಯಲು ಬೇಕಾದುವು. ಆಧ್ಯಾತ್ಮಿಕ ಪ್ರಗತಿಯಲ್ಲಿ ಸ್ವರಕ್ಷಣೆಗಾಗಿ ಈ ಶಕ್ತಿಗಳನ್ನು ಪಡೆಯಬೇಕಾಗಿದ

ಎರಡನೆಯ ರೇಖೆಯು ಅಷ್ಟಮಾತೃಕೆಯರನ್ನು ಸೂಚಿಸುತ್ತದ ಇವರಲ್ಲಿ ನಾಲ್ವರು ದ್ವಾರಗ ಳಲ್ಲೂ ಮತ್ತು ನಾಲ್ವರು ಮೂಲೆಗಳಲ್ಲೂ ಇರು ತ್ತಾರೆ ಇವರು ಬ್ರಾಹ್ಮೀ, ಮಾಹೇಶ್ವರೀ, ಕೌಮಾರೀ, ವೈಷ್ಣವೀ, ವಾರಾಹೀ, ಇಂದ್ರಾಣೀ, ಚಾಮುಂಡಾ ಮತ್ತು ಮಹಾಲಕ್ಷ್ಮೀ ಇವರ ಪುರುಷರುಕ್ರಮ ವಾಗಿ ಭೈರವರು-ಯಾರಂದರೆ--ಅಸಿತಾಂಗ, ರುರು, ಚಂಡ, ಕ್ರೋಧ, ಉನ್ಮತ್ತ, ಕಪಾಲ, ಭೀಷಣ ಮತ್ತು ಸಂಹಾರ

ಅತ್ಯಂತ ಒಳಭಾಗದ ರೇಖೆಯು 10 ಸ್ತ್ರೀ ದಿಕ್ಪಾಲ ಕರು ಅಥವಾ ಮುದ್ರಾಶಕ್ತಿಯರನ್ನು ಸೂಚಿಸುತ್ತದೆ ಪಶ್ಚಿಮದಲ್ಲಿರುವವಳು ಸರ್ವ ಸಂಕ್ಷೋಭಿಣೀ, ಉತ್ತ ರದಲ್ಲಿ ಸರ್ವವಿದ್ರಾವಿಣೀ, ಪೂರ್ವದಲ್ಲಿ ಸರ್ವಾಕ ರ್ಷಿಣೀ, ದಕ್ಷಿಣದಲ್ಲಿ ಸರ್ವವಶಂಕರೀ, ವಾಯುವ್ಯ ದಲ್ಲಿ ಸರ್ವೋನ್ಮಾದಿನೀ ಈಶಾನ್ಯದಲ್ಲಿ ಸರ್ವಾಂ ಕುಶಾ, ಆಗ್ನೇಯದಲ್ಲಿ ಖೇಚರೀ ನೈಋತ್ಯದಲ್ಲಿ ಸರ್ವ ಬೀಜಾ, ಮೇಲ್ಭಾಗದಲ್ಲಿ ಸರ್ವಯೋನಿ ಮತ್ತು ಕೆಳಗೆ ಸರ್ವ ತ್ರಿಖಂಡಾ

ಈ ಮುದ್ರಾ ದೇವತೆಯರಲ್ಲದೆ ಒಂಬತ್ತು ಮಂದಿ ಒಂದರಂತೆ ಚಕ್ರವನ್ನು ಆಳುವ ತ್ರಿಪುರಾಂಬಿಕೆಯು ಇಡೀ ಶ್ರೀಚಕ್ರಕ್ಕೆ ಸೇರಿದ್ದಾರೆ

ಈ ಚೌಕದ ಸುತ್ತಲೂ ಹಾಕಿರುವ ಮೂರು ರೇಖೆಗಳು ಲೋಕಚಕ್ರವನ್ನು, ಮಂಡಿಗಳು ಮತ್ತು ಕಾಲುಗಳನ್ನು ಸೂಚಿಸುತ್ತದ ಈ ಆವರಣದ ಅಧಿ ದೇವತೆಯು ಚಕ್ರೇಶ್ವರೀ ಅಥವಾ ತ್ರಿಪುರಾ ಮತ್ತು ಶ್ರೀಮಾತೆಯ ಗಣಕ್ಕೆ ಸೇರಿದ, ಇಲ್ಲಿರುವ ಸೇವಕಿ ಯರು ಪ್ರಕಟಯೋಗಿನಿಯರು ಈ ಆವರಣವು ಸೃಷ್ಟಿ -- ಸೃಷ್ಟಿಯನ್ನು ಸೂಚಿಸುವ ಸೃಷ್ಟಿಚಕ್ರದ ಪ್ರಥಮ ಭಾಗವನ್ನು ನಿರೂಪಿಸುತ್ತದ

ಮುತ್ತುಸ್ವಾಮಿ ದೀಕ್ಷಿತರ ನವಾವರಣಕೀರ್ತನಗ ಳಲ್ಲಿ ಪ್ರಥಮ ಆವರಣದ ಕೀರ್ತನೆಯು --

ಕಮಲಾಂಬಾ ಸಂರಕ್ಷತುಮಾಂ
ಹೃತ್ಕಮಲಾ ನಗರವಾಸಿನೀ

(ರಾಗ -- ಆನಂದಭೈರವಿ -- ತಾಳ -- ಮಿಶ್ರಜಾತಿ ಏಕತಾಳ)

ಇದರಲ್ಲಿ ಶ್ರೀಮಾತೆಯನ್ನು ತ್ರಿಪುರಾದಿ ಚಕ್ರೇ ಶ್ವರೀ, ಅಣಿಮಾದಿ ಸಿದ್ಧೀಶ್ವರೀ, ನಿತ್ಯಾಕಾಮೇಶ್ವರೀ ಇತ್ಯಾದಿ ಸ್ತುತಿಸಿ ನಾರಾಯಣನಿಗೆ ತಂಗಿಯೂ, ಶಿವ ನರಾಣಿಯೂ ಆದ ಆ ತ್ರಿಪುರಸುಂದರಿಯು ತನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರೆ

## ಎರಡನೆಯ ಆವರಣ :

ಪ್ರಥಮಾವರಣ ಪೂಜೆಯನ್ನು ಮಾಡಿದನಂತರ ದ್ವಿತೀಯಾವರಣದ ಪೂಜೆ ಈ ಆವರಣಕ್ಕೆ ಸರ್ವಾಶಾ ಪರಿಪೂರಕ ಆವರಣ ಎಂದು ಹೆಸರು ಇದು ಅಷ್ಟದಳ ಪದ್ಮದ ಹೊರಗಡೆಗೆ, ತ್ರಿವೃತ್ತದ ಒಳಗೆ ಇರುವ ಷೋಡಶ ಪತ್ರಕ ಈ ದಳಗಳ ಮಧ್ಯೆ ಅವಕಾಶ ಅಥವಾ ಜಾಗವಿರಕೂಡದೆಂದು ನಿಯಮ

ಈ ಆವರಣದ ಅಧಿದೇವತೆಯು ತ್ರಿಪುರೇಶಿ



# ಶ್ರೀ ವೆಂಕಟೇಶ್ವರಸ್ವಾಮಿ ದೇವಾಲಯ

## ಶ್ರೀನಿವಾಸ ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ ೨ ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನುಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು ತಿರುಪತಿ -- ಮದನಪಲ್ಲಿ ರಸ್ತೆಯಲ್ಲಿ ತಿರುಪತಿಯಿಂದ ಆರು ಮೈಲಿದೂರದ ಶ್ರೀನಿವಾಸ ಮಂಗಾಪುರಕ್ಕೆ ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ

## ದರ್ಶನ ಹಾಗೂ ಸೇವಾ ವಿವರಗಳು

| ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ | | ಶುಕ್ರವಾರಗಳಲ್ಲಿ |
|---|---|---|
| ಸುಪ್ರಬಾತ | ಪ್ರಾ 5--00 ಪ್ರಾ 5--30 | ಪ್ರಾ 5--00 ಪ್ರಾ 5--30 |
| ವಿಶ್ವರೂಪ ಸರ್ವದರ್ಶನ | ಪ್ರಾ 5--30 ಪ್ರಾ 6--00 | ಪ್ರಾ 5--30 ಪ್ರಾ 6--00 |
| ತೋಮಾಲ, ಕೊಲುವು | | |
| ಪಂಚಾಂಗಶ್ರವಣ | ಪ್ರಾ 6--00 ಪ್ರಾ 6--30 | ಪ್ರಾ 6--00 ಪ್ರಾ 6--30 |
| ಸಹಸ್ರನಾಮಾರ್ಚನೆ | ಪ್ರಾ 6--30 ಪ್ರಾ 7--00 | ಪ್ರಾ 6--30 ಪ್ರಾ 7--00 |
| ಮೊದಲನೇ ಗಂಟೆ | ಪ್ರಾ 7--00 ಪ್ರಾ 7--30 | ಪ್ರಾ 7--00 ಪ್ರಾ 7--30 |
| ಸರ್ವದರ್ಶನ | ಪ್ರಾ 7--30 ಪ್ರಾ 10--00 | *ಅಬಿಷೇಕ ಪ್ರಾ 7--30 ಪ್ರಾ 8--30 |
| | | ಸಮರ್ಪಣ ಪ್ರಾ 8--30 ಪ್ರಾ 9--30 |
| 2ನೇ ಅರ್ಚನೆ | | |
| 2ನೇ ಗಂಟೆ | ಪ್ರಾ 10--00 ಪ್ರಾ 10--30 | ಪ್ರಾ 9--30 ಪ್ರಾ 10--30 |
| *ಆರ್ಜಿತ | | ಕಲ್ಯಾಣೋತ್ಸವ ಪ್ರಾ 10--30 ಮ 12--00 |
| ಸರ್ವದರ್ಶನ | ಪ್ರಾ 10--30 ಸಂ 6--30 | ಪ್ರಾ 10--30 ಸಂ 6--30 |
| ರಾತ್ರಿ ಕೈಂಕರ್ಯ | | |
| ರಾತ್ರಿ ಗಂಟೆ | ಸಂ 6--30 ರಾ 7--00 | ಸಂ 6--30 ರಾ 7--00 |
| ಸರ್ವದರ್ಶನ | ರಾ 7--00 ರಾ 8--45 | ರಾ 7--00 ಪ್ರಾ 8--45 |
| ಏಕಾಂತ ಸೇವೆ | ರಾ 8--45 ರಾ 9--00 | ರಾ 8--45 ರಾ 9--00 |

| | |
|---|---|
| * ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ 200--00 |
| * ಅಬಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ 100--00 |
| ಅರ್ಚನೆ (ಒಂದು ವರ್ಷ) | ರೂ 42--00 |
| ಶಾಶ್ವತ ನಿತ್ಯಾರ್ಚನೆ | ರೂ 542--00 |

ಅವಳ ಸಹಾಯಕರೆಲ್ಲರೂ ಗುಪ್ತಯೋಗಿನಿಯರು ದಳಗಳು 16 ಶಕ್ತಿಗಳನ್ನು ಸೂಚಿಸುತ್ತವೆ ಅವು ಪೂರ್ವದಿಂದ ಅಪ್ರದಕ್ಷಿಣವಾಗಿ -- ಕಾಮಾಕರ್ಷಿಣೀ, ಬುದ್ಧ್ಯಾಕರ್ಷಿಣೀ, ಅಹಂಕಾರಾ, ಶಬ್ದಾ, ಸ್ಪರ್ಶಾ, ರೂಪಾ, ರಸಾ, ಗಂಧಾ, ಚಿತ್ತಾ, ಧೈರ್ಯಾ, ಸ್ಮೃತ್ಯಾ, ನಾಮಾ, ಬೀಜಾ, ಆತ್ಮಾ ಅಮೃತಾ, ಮತ್ತು ಶರೀರಾ ಇವರನ್ನು ಪೂರ್ವದಿಂದ ಪ್ರದಕ್ಷಿಣವಾಗಿ 16 ದಳಗಳ ಮೇಲೆ ಬರೆದಿರುವ 16 ಸ್ವರಗಳಿಂದ ಸೂಚಿಸಲಾಗಿದೆ

ಮಾನವದೇಹದ ಮೂಲಾಧಾರ ಚಕ್ರವು ಇದಕ್ಕೆ ಸಮನಾದ ಕೇಂದ್ರ ಈ ಆವರಣವುಸೃಷ್ಟಿ-- ಸ್ಥಿತಿಯ ಸಂಕೇತವಾದುದು

ಈ ಆವರಣದ ಪೂಜಾಕ್ರಮದಲ್ಲಿ ಹಾಡಬಹುದಾದ ಕೀರ್ತನೆ -- ಕಮಲಾಂಬಾಂಭಜರೇ ರೇ ಮಾನಸ -- ಕಲ್ಪಿತ ಮಾಯಾಕಾರ್ಯಂ ತ್ಯಜರೇ|| ರಾಗ -- ಕಲ್ಯಾಣಿ -- ಆದಿ ಈ ಕೀರ್ತನೆಯಲ್ಲಿ ಕಮಲದಂತೆ ಸುಂದರಳಾದ ಲಕ್ಷ್ಮೀಸರಸ್ವತಿಯರುಗಳಿಂದ ಸೇವಿಸಲ್ಪಡುವ, ಗುಪ್ತವಾದ ಯೋಗವುಳ್ಳವಳೂ, ನಿತ್ಯಕಲ್ಯಾಣಿಯೂ, ಭೂಮಿಯೇ ಮೊದಲಾದ ತತ್ವಸ್ವರೂಪಳೂ, ಜ್ಞಾನಸ್ವರೂಪಳೂ ಆದ ಶ್ರೀಮಾತೆಯನು ಭಜಿಸು ಎಂದು ಮನಸ್ಸನ್ನು ಸಂಬೋದಿಸಿ ಹಾಡಿದ್ದಾರೆ

### ತೃತೀಯಾವರಣ :

ದ್ವಿತೀಯಾವರಣದ ಪೂಜಾಕಾರ್ಯವನ್ನು ನೆಲವೇರಿಸಿದ ನಂತರ ಭಕ್ತನು ತೃತೀಯಾವರಣವನ್ನು ಪೂಜಿಸಲು ತೊಡಗುತ್ತಾನೆ

ಈ ಆವರಣಕ್ಕೆ ಸರ್ವಸಂಕ್ಷೋಭಣ ಆವರಣವೆಂದು ಹೆಸರು ಇದು ಅಷ್ಟದಳ ಪದ್ಮಾಕಾರದಲ್ಲಿದೆ ಇದು ಮುಖ್ಯಯಂತ್ರದ ಬಹಿರ್ಭಾಗದಲ್ಲಿದೆ ಇದರ ಅದಿದೇವತೆಗೆ ತ್ರಿಪುರಸುಂದರೀ ಎಂದು ಹೆಸರು ಇವಳ ಸಹಾಯಕರು ಗುಪ್ತತರ ಯೋಗಿನಿಯರು ಎಂಟು ದಳಗಳು ಎಂಟು ಶಕ್ತಿಗಳನ್ನು ಸೂಚಿಸುತ್ತವೆ ಈ ಶಕ್ತಿಗಳು ಪೂರ್ವದಲ್ಲಿ ಅನಂಗ ಕುಸುಮಾ (ವಚನ), ಅನಂಗಮೇಖಲಾ -- ದಕ್ಷಿಣದಲ್ಲಿ (ಆದನ), ಪಶ್ಚಿಮದಲ್ಲಿ ಅನಂಗಮದನಾ (ಗಮನ), ಉತ್ತರದಲ್ಲಿ ಅನಂಗಮದನಾತುರಾ (ವಿಸರ್ಜನ), ಆಗ್ನೇಯದಲ್ಲಿ ಅನಂಗರೇಖಾ (ಆನಂದ), ನೈಋತ್ಯದಲ್ಲಿ ಅನಂಗವೇಗಿನೀ (ಹಾನ), ವಾಯುವ್ಯದಲ್ಲಿ ಅನಂಗಮದನಾಂಕುಶಾ (ಉಪಾದಾನ) ಮತ್ತು ಈಶಾನ್ಯದಲ್ಲಿ ಅನಂಗಮಾ

ಲಿನೀ (ಉಪೇಕ್ಷಾ) ಇವರನ್ನು 'ಕ' ದಿಂದಾರಂಭವಾಗುವ ಎಂಟುವ್ಯಂಜನಗಳಿಂದ ಸೂಚಿಸಲಾಗಿದೆ

ಮಾನವದೇಹದಲ್ಲಿ ಇದಕ್ಕೆ ಸದೃಶವಾದ ಕೇಂದ್ರವು ನಾಭಿ ಅದವಾ ಕಟಿ ಈ ಆವರಣವು ಸೃಷ್ಟಿ--ಸಂಹಾರದ ಸಂಕೇತವಾಗಿದೆ

ಈ ಆವರಣದ ಪೂಜಾಕೀರ್ತನೆ -- ಶ್ರೀ ಕಮಲಾಂಬಿಕಯಾ ಕಟಾಕ್ಷಿತೋಹಂ -- ರಾಗಶಂಕರಾಭರಣ -- ರೂಪಕ ಈ ಕೀರ್ತನೆಯಲ್ಲಿ ದೀಕ್ಷಿತರು ಶ್ರೀಮಾತೆಯಾದ ಕಮಲಾಂಬಿಕೆಯನ್ನು ಅನಂಗಕುಸುಮಾದಿ ಅಷ್ಟವಿದವಾದ ಶಕ್ತಿಯುಳ್ಳವಳು, ಚಕ್ರ ಮಂಡಲವನ್ನು ಮನೆಯಾಗಿ ಉಳ್ಳವಳು, ಎಂಟುದಳಗಳ ತಾವರೆಯಲ್ಲಿ ಇರುವವಳು, ಇತ್ಯಾದಿ ಸ್ತುತಿಸಿ ಅವಳ ಕಟಾಕ್ಷದಿಂದ ಶಾಶ್ವತಾನಂದಗಳಿಂದ ಪರಿಪೂರ್ಣ ಬ್ರಹ್ಮನಾಗಿದ್ದೇನೆ ಎಂದು ಕೀರ್ತಿಸಿದ್ದಾರೆ

## ನಾಲ್ಕನೆಯ ಆವರಣ :

ಭಕ್ತನು ಮುಂದುವರಿದು ನಾಲ್ಕನೆಯ ಆವರಣದ ಪೂಜೆಯಲ್ಲಿ ತೊಡಗುತ್ತಾನೆ ಇದಕ್ಕೆ ಸರ್ವಸೌಭಾಗ್ಯದಾಯಕವೆಂದು ಹೆಸರು ಇದು 14 ಲೋಕಗಳನ್ನು ಸೂಚಿಸುವ 14 ಕೋನಗಳಿರುವ ಆಕಾರವುಳ್ಳದ್ದು ಇದರ ಅದಿದೇವತೆ ತ್ರಿಪುರವಾಸಿನೀ ಇವಳ ಪರಿವಾರದ ಸಹಾಯಕಿಯರು ಸಂಪ್ರದಾಯಯೋಗಿನಿಯರು

ಈ ಆವರಣದ 14 ಕೋನಗಳು ದೇಹದ 14 ನಾಡಿಗಳನ್ನು ಸೂಚಿಸುತ್ತವೆ ಅವು ಪೂರ್ವದಿಂದ ಅಪ್ರದಕ್ಷಿಣವಾಗಿ-- ಸರ್ವ ಸಂಕ್ಷೋಭಿಣೀ (ಅಲಂಬುಷಾ ನಾಡಿ), ಸರ್ವವಿದ್ರಾವಿಣೀ (ಕುಹೂ), ಸರ್ವಾಕರ್ಷಿಣೀ (ವಿಶ್ವೋದರಾ), ಸರ್ವಾಹ್ಲಾದಕಾರಿಣೀ (ವರಣಾ), ಸರ್ವಸಮ್ಮೋಹಿನೀ (ಹಸ್ತಿಜಿಹ್ವಾ), ಸರ್ವಸ್ತಂಭಿಣೀ (ಯಶೋವತೀ), ಸರ್ವಜೃಂಭಿಣೀ (ಪಯಸ್ವಿನೀ), ಸರ್ವವಶಂಕರೀ (ಗಾಂಧಾರೀ), ಸರ್ವರಂಜನೀ (ಪೂಷಾ), ಸರ್ವೋನ್ಮಾದಿನೀ (ಶಂಖಿನೀ), ಸರ್ವಾರ್ಥಸಾಧನೀ (ಸರಸ್ವತೀ), ಸರ್ವ ಸಂಪತ್ತಿಪೂರಣೀ (ಇಡಾ), ಸರ್ವಮಂತ್ರ ಮಯಿೂ (ಪಿಂಗಳಾ) ಮತ್ತು ಸರ್ವದ್ವಂದ್ವಕ್ಷಯಂಕರೀ (ಸುಷುಮ್ನಾ) ಇವುಗಳನ್ನು ವರ್ಣಮಾಲೆಯ ಮೊದಲ ಹದಿನಾಲ್ಕು ಅಕ್ಷರಗಳಿಂದ ಸೂಚಿಸಲಾಗಿದೆ

ಈ ಆವರಣದ ಪೂಜಾಕೀರ್ತನೆ -- ಕಮಲಾಂಬಿಕಾಯೈ ಕನಕಾಂಶುಯೈ ಕರ್ಪೂರ ವೀಟಿಕಾಯೈ ನಮಸ್ತೇ ನಮಸ್ತೇ || -- ರಾಗ -- ಕಾಂಭೋಜಿ -- ಖಂಡಜಾತಿ ಅಟತಾಳ ಈ ಕೀರ್ತನೆಯಲ್ಲಿ ಶ್ರೀಮಾತೆಯಾದ ಕಮಲಾಂಬಿಕೆಯನ್ನು ಸಕಲ ಸೌಭಾಗ್ಯದಾಯಕಿ, ನಾಲ್ಕನೆಯ ತೆರೆಯುಳ್ಳವಳು, ಹದಿನಾಲ್ಕು ಲೋಕಗಳನ್ನು ಕಾಪಾಡುವವಳು, ಸಂಪ್ರದಾಯ ಅಂತಃಕರಣಳು ಎಂಬುದಾಗಿ ತಾಯಿಯ ದಿವ್ಯರೂಪ, ಶಕ್ತಿ, ದಯಾದಿಗುಣಗಳನ್ನು ವರ್ಣಿಸಿ ಅವಳನ್ನು ದೀಕ್ಷಿತರು ಪದೇಪದೇ ನಮಿಸಿ ಸ್ತುತಿಸಿದ್ದಾರೆ

## ಐದನೆಯ ಆವರಣ .

ಭಕ್ತನು ಈಗ ಪಂಚಮಾವರಣದ ಪೂಜೆಯಲ್ಲಿ ತೊಡಗುತ್ತಾನೆ ಈ ಆವರಣಕ್ಕೆ ಸರ್ವಾರ್ದಸಾದಕವೆಂದು ಹೆಸರು ಇದು ಹತ್ತು ಕೋನಗಳಿರುವ ಆಕಾರದಲ್ಲಿರುವ ಬಹಿರ್ದಶಾರ ಈ ಆವರಣದ ಕೇಂದ್ರಾದಿದೇವತೆಯು ತ್ರಿಪುರಶ್ರೀ ಇವಳ ಸಹಾಯಕಿಯರು ಕುಲೋತ್ತೀರ್ಣ ಯೋಗಿನಿಯರು ಈ ದಶಕೋನಗಳಲ್ಲಿ ಹತ್ತು ಮಂಗಳಕರ ದೇವತೆಗಳಿದ್ದಾರೆ ಅವರು ಪೂರ್ವದಿಂದ ಅಪ್ರದಕ್ಷಿಣವಾಗಿ ಸರ್ವಸಿದ್ಧಿಪ್ರದಾ, ಸರ್ವ ಸಂಪತ್ಪ್ರದಾ, ಸರ್ವಪ್ರಿಯಂಕರೀ, ಸರ್ವ ಮಂಗಳಕಾರಿಣೀ, ಸರ್ವಕಾಮಪ್ರದಾ, ಸರ್ವದುಃಖ ವಿಮೋಚನೀ, ಸರ್ವಮೃತ್ಯುಪ್ರಶಮನೀ, ಸರ್ವವಿಘ್ನ ನಿವಾರಿಣೀ, ಸರ್ವಾಂಗ ಸುಂದರೀ ಮತ್ತು ಸರ್ವ ಸೌಭಾಗ್ಯದಾಯಿನೀ ಇವರನ್ನು 'ಕ' ದಿಂದ ಮತ್ತು 'ಚ' ದಿಂದ ಆರಂಭವಾಗುವ ಐದು ಐದು ವ್ಯಂಜನಗಳಿಂದ ಸೂಚಿಸಲಾಗಿದೆ ಸಂಖ್ಯೆ 10 ವಿಶ್ವದ ಕ್ಷೇಮವನ್ನುಂಟುಮಾಡಿದ ವಿಷ್ಣುವಿನ ದಶಾವತಾರಗಳನ್ನು ಸೂಚಿಸುತ್ತದೆ ಈ ಆವರಣವು ಸ್ಥಿತಿ ಚಕ್ರದ ಎರಡನೆಯ ಭಾಗವಾಗಿದೆ ಮಾನವ ದೇಹದಲ್ಲಿ ಇದಕ್ಕೆ ಸದೃಶವಾದ ಕೇಂದ್ರವು ಕಂಠದಲ್ಲಿರುವ ವಿಶುದ್ಧ ಚಕ್ರ

ಭೈರವಿರಾಗ ಮತ್ತು ಮಿಶ್ರಜಾತಿಝುಂಪೆತಾಳದಲ್ಲಿರುವ 'ಕಮಲಾಂಬಾಯಾಃ ಪರಂ ನಹಿ ರೇ ರೇ ಚಿತ್ತ ಕ್ಷಿತ್ಯಾದಿ ಶಿವಾಂತ ತತ್ವ ಸ್ವರೂಪಿಣ್ಯಾಂ || ಎಂಬುದು ಈ ಆವರಣದ ಪೂಜಾಕೀರ್ತನೆ

ಈ ಕೀರ್ತನೆಯಲ್ಲಿ ದೀಕ್ಷಿತರು ಮನಸ್ಸನ್ನು ಸಂಬೋಧಿಸಿ -- ಕಮಲಾಂಬಿಕೆಗಿಂತ ಬೇರೆ ಯಾರೂ ಇಲ್ಲ ಹೊರಗೆ ಹತ್ತು ದಳಗಳುಳ್ಳ ಇರುವ ಚಕ್ರದಲ್ಲಿ ಇರುವವಳೂ, ಲಕ್ಷ್ಮೀ, ಸರಸ್ವತೀ, ಭೈರವೀ ಇವರೂಗಳಿಂದ ಸೇವಿಸಲ್ಪಡುವವಳೂ, ಸರ್ವವನ್ನೂ ಕೊಡುವ ಹತ್ತು ಬಗೆಯ ಶಕ್ತಿಗಳಿಂದ ಪೂಜಿಸಲ್ಪಟ್ಟ ರೂಪವುಳ್ಳವಳೂ, ಎಲ್ಲ ಇಷ್ಟಾರ್ದಗಳನ್ನು ಸಂಪೂರ್ಣವಾಗಿ ಕೊಡುವವಳೂ ಬುಡ ಮೊದಲಾದ ಆದಾರವುಳ್ಳ ಬೇದಿಸಲ್ಪಟ್ಟ ಹತ್ತು ಧ್ವನಿಗಳ ಬೇದವನ್ನು ತಿಳಿದವಳು ಇತ್ಯಾದಿ ಶ್ರೀಮಾತೆಯ ದಿವ್ಯ ಗುಣಾತಿಶಯಗಳನ್ನು ಸ್ತುತಿಸಿದ್ದಾರೆ

## ಆರನೆಯ ಆವರಣ :

ಭಕ್ತನು ಈಗ ಆರನೆಯ ಆವರಣದ ಪೂಜೆಯಲ್ಲಿ ತೊಡಗುತ್ತಾನೆ ಈ ಆವರಣಕ್ಕೆ ಸರ್ವ ರಕ್ಷಾಕರ ಎಂದು ಹೆಸರು ಇದು ಮೇಲಿನ ಆವರಣದ ಒಳಗಡೆ ಇರುವ ದಶಕೋನಾಕಾರವನ್ನು ಹೊಂದಿರುವಂತಹುದು ಆದ್ದರಿಂದ ಇದಕ್ಕೆ ಅಂತರ್ದಶಾರವೆಂದು ಹೆಸರು ಈ ಆವರಣದ ಕೇಂದ್ರಾದಿದೇವತೆ ತ್ರಿಪುರಮಾಲಿನಿ ಇವಳ ಸಹಾಯಕಿಯರು ನಿಗರ್ಭಯೋಗಿನಿಯರು ಈ ದಶಕೋನಗಳು ವಹ್ನಿಕಲೆಯ ಹತ್ತು ಶಕ್ತಿಗಳನ್ನು ಸೂಚಿಸುತ್ತವೆ ಇವು ಸರ್ವಜ್ಞಾ, ಸರ್ವ ಶಕ್ತಿಪ್ರದಾ, ಸರ್ವೈಶ್ವರ್ಯಪ್ರದಾ, ಶೋಷಣ, ಸರ್ವಜ್ಞಾನಮಯಿೂ, ಸರ್ವವ್ಯಾದಿವಿನಾಶಿನೀ, ಪ್ಲಾವಕ, ಸರ್ವಾದಾರಸ್ವರೂಪಾ, ಸರ್ವಪಾಪ ಹರಾ, ಸರ್ವ ರಕ್ಷಾಸ್ವರೂಪಿಣೀ ಮತ್ತು ಸರ್ವೇಪ್ಸಿತ ಫಲಪ್ರದಾ, ಇವು ಪೂರ್ವದಿಂದ ಅಪ್ರದಕ್ಷಿಣವಾಗಿ ಕ್ರಮವಾಗಿವೆ ಈ ಆವರಣವು ಸ್ಥಿತಿ ಚಕ್ರದ ಮೂರನೆಯಬಾಗವನ್ನು, ಸ್ಥಿತಿಸಂಹಾರವನ್ನು ಸೂಚಿಸುತ್ತದೆ ಇದು ಮಾನವದೇಹದಲ್ಲಿ ಹುಬ್ಬುಗಳ ಮದ್ಯೆ ಇರುವ ಮಣಿಪೂರ ಚಕ್ರಕ್ಕೆ ಸದೃಶವಾದುದು

ಪುನ್ನಾಗವರಾಳಿರಾಗ -- ಆದಿತಾಳದಲ್ಲಿರುವ--

ಕಮಲಾಂಬಿಕಾಯಾಃ ತವಚಕ್ತೋಹಂ

ಶ್ರೀ ಶಂಕರ್ಯಾ ಶ್ರೀಕರ್ಯಾಃ ಸಂಗೀತರಸಿಕಾಯಾ ಶ್ರೀ ||

ಎಂಬುದು ಈ ಆವರಣದ ಪೂಜಾಕೀರ್ತನೆ

ಇದರಲ್ಲಿ ದೀಕ್ಷಿತರು ಕಮಲಾಂಬಿಕೆಯನ್ನು ಗಾನಪ್ರಿಯಳು, ಹತ್ತು ಕಲೆಗಳುಳ್ಳ ತೇಜೋರೂಪದಿಂದ ಕೂಡಿರುವವಳು, ಅಂತರ್ದಶಾರಳು, ಎಲ್ಲರನ್ನೂ ರಕ್ಷಿಸುವವಳು ಚಕ್ರೇಶ್ವರಿಯೂ, ಹತ್ತು ಬಗೆಯ ಶಕ್ತಿಗಳಿಂದ ಕೂಡಿದವಳು, ಹತ್ತು ಮುದ್ರೆಗಳಿಂದ ಪೂಜಿಸಲ್ಪಡುವವಳು ಇತ್ಯಾದಿ ಶ್ರೀ ಮಾತೆಯ ವಿಶೇಷಗುಣ, ರೂಪಗಳನ್ನು ಸ್ತುತಿಸಿ ಅಂತಹ ತಾಯಿಗೆ ತಾನು ಭಕ್ತನೆಂದು ಕೀರ್ತಿಸಿದ್ದಾರೆ

## ಏಳನೆಯ ಆವರಣ :

ಭಕ್ತನು ಈಗ ಏಳನೆಯ ಆವರಣದ ಪೂಜೆಯಲ್ಲಿ ತೊಡಗುತ್ತಾನೆ ಈ ಆವರಣಕ್ಕೆ ಸರ್ವರೋ

ಗಹರಾ ಎಂದು ಹೆಸರು ಇದರಲ್ಲಿ ಎಂಟು ಕೋನಗಳಿರುವುದರಿಂದ ಇದಕ್ಕೆ ಅಷ್ಟಕೋನ ಅದವಾ ವಸುಕೋನವೆಂದು ಹೆಸರು ಇದು ಹಿಂದಿನ ಆವರಣದೊಳಗೆ ಮುಖ್ಯ ತ್ರಿಕೋನದ ಹೊರಗಡೆ ಇರುವ ಆವರಣ ಇದರ ಅದಿದೇವತೆ ತ್ರಿಪುರಸಿದ್ಧಾ ಅದಳ ಸಹಾಯಕಿಯರು ರಹಸ್ಯಯೋಗಿನಿಯರು

ಎಂಟು ಮೂಲೆಗಳು ಎಂಟು ಬಗೆಯ ಮೂಲಭೂತವಾದ ಪ್ರೇರಕ ಶಕ್ತಿಗಳನ್ನು ಸೂಚಿಸುತ್ತವೆ ಈ ಶಕ್ತಿಗಳು ವಶಿನೀ (ಶೀತಕ್ಕೆ ಸಂಬಂದಿಸಿದ್ದು), ಕಾಮೇಶೀ (ಉಷ್ಣ), ಮೋಹಿನೀ (ಸುಖ), ವಿಮಲಾ (ದುಃಖ), ಅರುಣ (ಇಚ್ಛಾ), ಜಯಿನೀ (ಸತ್ವ), ಸರ್ವೇಶೀ (ರಜಸ್ಸು) ಮತ್ತು ಕೌಲಿನೀ -- ಕುಲ ಸುಂದರೀ (ತಮಸಾ) ಇವರು ಅಪ್ರದಿಕ್ಷಣಕ್ರಮದಲ್ಲಿದ್ದು ತಾಯಿ ಲಲಿತೆಗೆ ಸಮೀಪದವಾಗ್ದೇವತೆಗಳಾಗಿದ್ದಾರೆ ಸಂಖ್ಯೆ ಎಂಟು ಶಿವನ ಎಂಟು ರೂಪಗಳನ್ನು (ರುದ್ರ, ಬವ, ಶರ್ವ, ಈಶಾನ, ಪಶುಪತಿ, ಭೀಮ, ಉಗ್ರ, ಮಹಾದೇವ) ಸೂಚಿಸುತ್ತದೆ ಇವು ಪವರ್ಗದ ಐದು ಅಕ್ಷರಗಳು ಮತ್ತು ಮ, ಶ, ಷ, ಸ ಅಕ್ಷರಗಳಿಂದು ಸಂಕೇತಿಸಲ್ಪಟ್ಟಿವೆ

ಈ ಆವರಣವು ಸಂಹಾರ -- ಸೃಷ್ಟಿಯನ್ನು ಸೂಚಿಸುವ ಅಸಂಹಾರ ಚಕ್ರ ಅದವಾ ಮೂರನೇ ಚಕ್ರದ ಮೊದಲಭಾಗವನ್ನು ಸೂಚಿಸುತ್ತದೆ ಇದಕ್ಕೆ ಸದೃಶವಾದುದು ಮಾನವದೇಹದ ಲಲಾಟ -- ವಾಸ್ತಾದೀಪ್ತಾನ ಚಕ್ರ ಈ ಆಕಾರ ಮತ್ತು ಮುಖ್ಯ ತ್ರಿಕೋನದ ನಡುವೆ ನಾಲ್ಕು ಆಯುಧದೇವತೆಗಳು ಮುಖ್ಯ ತ್ರಿಕೋನವನ್ನು ನಾಲ್ಕು ದಿಕ್ಕುಗಳಲ್ಲಿ ಕಾಯುತ್ತಿರುವರು ಅವರು ಬಾಣೆನೀ, ಛಾಪಿನೀ, ಪಾಶಿನೀ ಮತ್ತು ಅಂಕುಶಿನೀ

ಶಹನಾರಾಗದಲ್ಲಿ -- ತ್ರಶ್ಯತ್ರಿಪುಟ ತಾಳದಲ್ಲಿರುವ ಶ್ರೀ ಕಮಲಾಂಬಿಕಾಯಾಂ ಭಕ್ತಿಂ ಕರೋಮಿ, ಶ್ರಿತ ಕಲ್ಪವಾಟಿಕಾಯಾಂ, ಚಂಡಿಕಾಯಾಂ, ಜಗದಂಬಿಕಾಯಾಂ || ಎಂಬುದು ಈ ಆವರಣದ ಪೂಜಾಕೀರ್ತನೆ ಶ್ರೀ ಮಾತೆಯನ್ನು ಬೀಜಾಕ್ಷರವೆಂಬ ಅರಣ್ಯದಲ್ಲಿ ಜಿಂಕೆಯಂತಿರುವವಳು, ಹ್ರೀಂಕಾರ ನಿಯಾಮಕಳೂ, ಸರಸ್ವತಿ ರೂಪಳೂ, ಸರ್ವರೋಗಹರಳೂ, ವೀಣಾವಾದಿನಿಯು ಇತ್ಯಾದಿ ದಿವ್ಯ ಕಲ್ಯಾಣಗುಣ ರೂಪವೈಭವಾದಿ ಅತಿಶಯಗಳುಳ್ಳ ಲೋಕಮಾತೆಯ ಸೇವೆ ಮಾಡುವುದಾಗಿ ದೀಕ್ಷಿತರು ಕೀರ್ತಿಸಿದ್ದಾರೆ

### ಎಂಟನೆಯ ಆವರಣ :

ಈಗ ಬಕ್ತನು ಸರ್ವಸಿದ್ಧಿ ಪ್ರದಾ ಎಂಬ ಎಂಟನೆಯ ಆವರಣದ ಪೂಜೆಯಲ್ಲಿ ತೊಡಗುತ್ತಾನೆ ಇದು ತಲೆಕೆಳಗಾದಂತಿರುವ ತ್ರಿಕೋನವಾಗಿ ಬಕ್ತನಿಗೆ ಎದುರಾಗಿ, ಪೂರ್ವದಿಕ್ಕಿಗೆ ಎದುರಾಗಿರುತ್ತದೆ ಇದು ಪ್ರಮುಖ ತ್ರಿಕೋನವಾಗಿ ಮಧ್ಯದಲ್ಲಿದ್ದು ಸ್ವತಂತ್ರವಾದ ರಚನೆಯುಳ್ಳದ್ದಾಗಿದೆ ಇದಕ್ಕೆ ಕಾಮಕಲಾ ಎಂದು ಹಸರು ಇದು ಕೇಂದ್ರ ಬಿಂದುವಿನ ವಿಕಾಸ ಅದವಾ ವಿಸ್ತರಣ ಇದರ ಅಧಿದೇವತೆ ತ್ರಿಪುರಾಂಬಾ ಇವಳ ಪರಿವಾರದವರಿಗೆ ಅತಿರಹಸ್ಯ ಯೋಗಿನಿಯರೆಂದು ಹಸರು

ಈ ತ್ರಿಕೋನದ ಮೂರು ಮೂಲೆಗಳು ಶ್ರೀಮಾತೆಯ ಮೂರು ಶಕ್ತಿಗಳ ಸೂಚಕಗಳಾಗಿವೆ ಕಾಮರೂಪ ಪೀಠ ಸ್ಥಿತಳಾದ ಕಾಮೇಶ್ವರೀ, ಚಂದ್ರನನ್ನು ಸೂಚಿಸುತ್ತಾಳೆ ಮತ್ತು ವಾಮಾ ಅಂದರೆ ಬ್ರಹ್ಮನ ಸೃಷ್ಟಿ ಶಕ್ತಿಯನ್ನು ಸೂಚಿಸುವುದಾಗಿದೆ ಇದು ಅವ್ಯಕ್ತ ಪ್ರಕೃತಿಯ ಪ್ರತೀಕವಾಗಿದೆ ಪೂರ್ವದ ಕಡೆ ಇರುವುದು ಪೂರ್ಣಾಗಿರಿ ಪೀಠಸ್ಥಳಾದ ವಜ್ರೇಶ್ವರೀ ಇದು ಜ್ಯೇಷ್ಠಾ ಅಂದರ ವಿಷ್ಣುವಿನ ಸ್ಥಿತಿ ಶಕ್ತಿಯ ಸೂಚಕವಾಗಿರುವುದಲ್ಲದ ಮಹತ್ತಿನ ಪ್ರತೀಕವಾಗಿದೆ ಇದು ಸೂರ್ಯನನ್ನು ಸೂಚಿಸುತ್ತದೆ ಜಾಲಂದರ ಪೀಠಸ್ಥಿತಳಾದವಳು ಬಗಮಾಲಿನೀ ಇದು ರುದ್ರನ ಸಂಹಾರ ಶಕ್ತಿ ಸೂಚಕವಾದ ಅಗ್ನಿಯ ಪ್ರತೀಕ ಅಹಂಕಾರದ ಸೂಚಕ

ಮೂರು ಕೋನಗಳು ಪಶ್ಯಂತೀ, ಮಧ್ಯಮಾ ಮತ್ತು ವೈಖರೀ ಎಂಬ ಮೂರು ಬಗಯ ವಾಕ್

ಅದವಾ ಮಾತನ್ನು ಸೂಚಿಸುವುದರಿಂದ ಇವಕ್ಕೆ ವಾಗ್ಭವ ಎಂದು ಹೆಸರು ಇದು ಶಿವ -- ಶಕ್ತಿ ಸಮಾಯೋಗವನ್ನು ಸೂಚಿಸುತ್ತದೆ ಇದನ್ನು ಶ್ರೀಮಾತೆಯ ಶಿರ (ಮಸ್ತಕ)ವೆಂದು ಪರಿಗಣಿಸಲಾಗಿರುವುದರಿಂದ, ಮಾನವದೇಹದ ಸಹಸ್ರಾರ ಚಕ್ರವು ಇದರ ಸದೃಶವಾದುದು ಕಾಯರೂಪ ಎಡಗಣ್ಣು, ಪೂರ್ಣಾಗಿರಿ -- ಬಲಗಣ್ಣು, ಜಾಲಂದರ -- ಹುಬ್ಬುಗಳ ನಡುವೆ ಇರುವ ಕೇಂದ್ರ -- ಈ ಮೂರೂ ಇಚ್ಛಾ, ಜ್ಞಾನ, ಕ್ರಿಯಾ ಎಂಬ ಮೂಲ ಪ್ರಕೃತಿಗಳನ್ನು ಸೂಚಿಸುತ್ತವೆ ಮಿಶ್ರ ಮತ್ತು ಏಕೀಕೃತ ಸ್ವಭಾವವನ್ನು ತ್ರಿಪುರಾ ಸೂಚಿಸುವುದಾಗಿ ಭಾವಿಸಲಾಗಿದೆ ಈ ಕೇಂದ್ರವು ಸಂಹಾರ ಸ್ಥಿತಿಯನ್ನು ಸೂಚಿಸುವ ಮೂರನೆಯದಾದ ಸಂಹಾರ ಚಕ್ರದ ಎರಡನೇ ಭಾಗದ ಸಂಕೇತವಾಗಿದೆ

ಮುಖ್ಯ ತ್ರಿಕೋನವು ಲಲಿತಾ ಅದವಾ ರಾಜರಾಜೇಶ್ವರಿಯನ್ನು ನಿರೂಪಿಸುವುದೆಂದು ಪರಿಗಣಿಸಿದರೆ ತ್ರಿಕೋನದ ಸುತ್ತಲಿರುವ ಎಂಟು ಮೂಲೆಗಳುಳ್ಳ ಆಕಾರವು ತನ್ಮಾತ್ರ ಅಂದರೆ ಭೂಮಿ, ನೀರು, ಅಗ್ನಿ, ವಾಯು, ಆಕಾಶವೆಂಬ ಪಂಚಭೂತಗಳನ್ನೂ, ಕಾಮನ ಸಂಕೇತವಾಗಿರುವ ಕಾಮ, ರಾಗ, ದ್ವೇಷ, ಮನಸ್ಸು ಮತ್ತು ಇಕ್ಷು ದಂಡವೆಂಬ ಪಂಚಬಾಣಗಳನ್ನು ಸೂಚಿಸುತ್ತವೆ ಇವು ಐದನ್ನೂ ದೇವಿಯು ಹಿಡಿದಿದ್ದಾಳೆ ಮುಖ್ಯ ತ್ರಿಕೋನವು ಶ್ವೇತವರ್ಣವಾಗಿದ್ದು ಶುದ್ಧ ಸತ್ವದ ಸಂಕೇತವಾಗಿದೆ

ಈ ಆವರಣದ ಪೂಜಾಕೀರ್ತನೆಯು ಘಂಟಾ ರಾಗದಲ್ಲಿ -- ಅವಿತಾಳದಲ್ಲಿರುವ ಶ್ರೀ ಕಮಲಾಂಬಿಕೇಪಾವ ಶಿವೇ, ಕರಧೃತ ಶುಕಶಾರಿಕೇ || ಎಂಬುದು ಈ ಕೀರ್ತನೆಯಲ್ಲಿ ಶ್ರೀ ಮಾತೆಯನ್ನು ಲೋಕಪಾಲಿನಿ, ಲೋಕಜನನಿ, ಭಗಮಾಲಿನಿ, ಸರ್ವಸಿದ್ಧಿಪ್ರದಾಯಿಕೇ, ತ್ರಿಪುರಾಂಬಿಕೇ, ತ್ರಿಕೋಣವನ್ನು ಮನೆಯಾಗಿ ಉಳ್ಳವಳು, ಸದಾ ಮುಕ್ತಿಗೆ ಕಾರಣಳಾದವಳು, ಶಬ್ದತನ್ಮಾತ್ರ, ಸ್ಪರ್ಶತನ್ಮಾತ್ರ, ರೂಪತನ್ಮಾತ್ರ, ರಸತನ್ಮಾತ್ರ, ಗಂಧತನ್ಮಾತ್ರವೆಂಬ ಪಂಚತನ್ಮಾತ್ರಗಳನ್ನು ಬಾಣವಾಗಿ ಉಳ್ಳವಳು ಆಶ, ಪಾಶ, ದ್ವೇಷ, ಅಂಕುಶಾಯುದವನ್ನು ಧರಿಸಿದವಳು, ಅತಿ ರಹಸ್ಯ ಯೋಗಿನಿಯರಲ್ಲಿ ಆಸಕ್ತಿ ಯುಳ್ಳವಳೆಂದು ಅವಳ ಸ್ವರೂಪಲಾವಣ್ಯ ಶಕ್ತಿಗಳನ್ನು ಕೀರ್ತಿಸಿ ದೀಕ್ಷಿತರು ತನ್ನನ್ನು ಕಾಪಾಡಬೇಕೆಂದು ಪ್ರಾರ್ಥಿಸಿದ್ದಾರ

## *ಒಂಭತ್ತನೆಯ ಆವರಣ :*

ಈಗ ಶ್ರೀಮಾತೆಯ ಭಕ್ತನು ಅವಳ ಸನ್ನಿಧಿಯಾದ ಒಂಭತ್ತನಯ ಆವರಣವನ್ನು ತಲುಪಿ ಅವಳ ದರ್ಶನಾನಂದವನ್ನು ಪಡೆಯುತ್ತಾನ ಈ ಆವರಣಕ್ಕೆ ಸರ್ವಾನಂದ ಮಯವೆಂದು ಹೆಸರು ಇದು ವಾಸ್ತವವಾಗಿ ಬಿಂದು, ಶ್ರೀಮಾತೆಯ ಉಡ್ಡಿಯಾನಪೀಠ ' ಅವಳು ಮಹೋಡ್ಯಾಣ ಪೀಠಸ್ಥೆ ಮತ್ತು ಬಿಂದು ಮಂಡಲವಾಸಿನೀ ಇಲ್ಲಿಯ ಅಧಿದೇವತೆಯ ಹೆಸರು ತ್ರಿಪುರಸುಂದರೀ, ಲಲಿತಾ, ಕಾಮಕಲಾ, ಪರಾಬಟ್ಟಾರಿಕಾ, ಮಹಾಕಾಮೇಶ್ವರೀ ಅದವಾ ಶ್ರೀವಿದ್ಯಾ ಇವಳು ಇಡೀ ಚಕ್ರದ ಈಶ್ವರೀ -- ಶ್ರೀ ಚಕ್ರರಾಜರಾಜೇಶ್ವರೀ ಇವಳ ಪರಿವಾರದವರು ಪರಾಪರ ರಹಸ್ಯಯೋಗಿನಿಯರು ಈ ಕೇಂದ್ರವು ಕೆಂಪು ಬಣ್ಣ ಉಳ್ಳದ್ದು ಇದು ವಿಮರ್ಶಾ ಅದವಾ ಶಕ್ತಿಸೂಚಕ -- ರಜೋಗುಣ ಮೂರು ಗುಣಗಳಿಗೆ ಬೇರೆ ಬೇರೆ ಬಣ್ಣಗಳಿವೆ -- ಸತ್ವ -- ಬಿಳಿಬಣ್ಣ, ರಜಸ್ -- ಕೆಂಪು, ತಮಸ್ -- ಕಪ್ಪು ಇದು ಅಬೇದ ವಿಮರ್ಶಾಬೂಮಿ ಶಿವ -- ಶಕ್ತಿ ಸಮಾಯೋಗದ ಕೇಂದ್ರ

ಈ ಬಿಂದುವು ಸೋಮ (ಕೆಂಪುಬಣ್ಣ) -- ಇದು ಮಾನವ ದೇಹದ ಇಡಾ ನಾಡಿಯನ್ನು ಸೂಚಿಸುವುದು , ಸೂರ್ಯ (ಬಿಳಿಬಣ್ಣ) -- ಮಾನವದೇಹದ ಪಿಂಗಳ ನಾಡಿಯನ್ನು ಸೂಚಿಸುವುದು , ಮತ್ತು ಅಗ್ನಿ (ಮಿಶ್ರಬಣ್ಣ) -- ಮಾನವ ದೇಹದ ಮಧ್ಯ ಸುಷುಮ್ನಾನಾಡಿಯನ್ನು ಸೂಚಿಸುವುದು -- ಈ ಮೂರು ಬಿಂದುಗಳನ್ನು ತ್ರಿಕೋಣಾಕಾರದಲ್ಲಿ ಒಳಗೊಂಡಿದೆ

ಈ ಕೇಂದ್ರವು ೩ ನಯ ಚಕ್ರದ (ಸಂಹಾರ) ಕೊನಯ ಬಾಗವಾಗಿದ್ದು ಸಂಹಾರ -- ಸಂಹಾರವನ್ನು ಸೂಚಿಸುವುದು ಇದಕ್ಕೆ ಸದಾನಂದ ಪೂರ್ಣಾ ಎಂದೂ ಹೆಸರು ಮಾನವದೇಹದ ಸಹಸ್ರಾರ ಚಕ್ರದ ಮಧ್ಯ ಕವಾಟವಾದ ಬ್ರಹ್ಮರಂಧ್ರವನ್ನು ಇದು ಸೂಚಿಸುತ್ತದೆ

ಆಹಿರಿರಾಗದ -- ತ್ರಿಶ್ರ ಏಕತಾಳದಲ್ಲಿರುವ ಶ್ರೀ ಕಮಲಾಂಬಾ ಜಯತೇ, ಅಂಬ ಜಯತೇ, ಜಗದಂಬಾ ಜಯತೇ | ಎಂಬುದು ಈ ಆವರಣದ ಪೂಜಾಕೀರ್ತನ ಇದರಲ್ಲಿ ಶ್ರೀಮಾತೆಯನ್ನು ಶ್ರೀಪುರದ ಮಧ್ಯದಲ್ಲಿ ಚಿಂತಾಮಣಿಯಂತಿರುವವಳು ಪೂಜ್ಯಳಾದ ತ್ರಿಪುರಸುಂದರೀ, ಸದಾ ಆನಂದಮಯವಾದ ಚಕ್ರದಲ್ಲಿರುವವಳು, ಆಧಿಬೌತಿಕ, ಆಧ್ಯಾತ್ಮಿಕ, ಆಧಿದೈವಿಕ ಎಂಬ ತಾಪಗಳನ್ನು ನಾಶಮಾಡುವವಳು, ಜ್ಞಾನಸ್ವರೂಪಳು, ಕ್ಲೀಂ, ಹ್ರೀಂ, ಶ್ರೀಂ ಈ ಮಂತ್ರಸ್ವರೂಪಿಣಿಯೂ, ವೇದಸ್ವರೂಪವನ್ನು ತಿಳಿಸಿದವಳೂ, ಸಮರಸವನ್ನು ತೋರಿಸುವವಳೂ ಎಂಬುದಾಗಿ ಅವಳ ಕಲ್ಯಾಣಗುಣಾದಿಗಳನ್ನು ಕೀರ್ತಿಸಿ, ಅವಳು ತನ್ನ ಮನಸ್ಸನ್ನು ಸೇರಲಿ, ಅವಳಿಗ ಜಯವಾಗಲಿ ಎಂದು ಹಾಡಿ ದೀಕ್ಷಿತರು ಪ್ರಾರ್ಥಿಸಿದ್ದಾರ

ಧ್ಯಾನಕೀರ್ತನೆ, ಶ್ರೀಮಹಾಗಣಪತಿ, ಬಾಲಸುಬ್ರಹ್ಮಣ್ಯಂ ಎಂಬ ಕೀರ್ತನೆಗಳೂ ಕೊನೆಯ ಮಂಗಳಾಚರಣದ ಶ್ರೀ ಕಮಲಾಂಬಿಕೆ ಎಂಬ ಶ್ರೀರಾಗದ ಕೀರ್ತನೆಯೂ ಸೇರಿ ನವಾವರಣ ಕೃತಿಗುಚ್ಛವಾಗಿದೆ

ಶ್ರೀಚಕ್ರದ ಪೂಜೆಯನ್ನು ಗುರುಮುಖೇನ ಮಂತ್ರ ತಂತ್ರಗಳನ್ನು ಕಲಿತು ನಿಷ್ಠೆಯಿಂದ ಪೂಜಿಮಾಡುವ ಪದ್ಧತಿ ರೂಢಿಯಲ್ಲಿದೆ ಕೆಲವರು ಪ್ರತಿ ಶುಕ್ರವಾರ ಲಕ್ಷ್ಮೀ ಅಷ್ಟೋತ್ತರ ಶತನಾಮಗಳಿಂದ ಸಂಕಲ್ಪಮಾಡಿ ಹರಿದ್ರಾಚೂರ್ಣ, ಪುಷ್ಪಾದಿಗಳಿಂದ ಅರ್ಚನೆ ಮಾಡುವುದು, ಮಿಕ್ಕ ದಿನಗಳಲ್ಲಿ ದ್ವಾದಶ ನಾಮಾರ್ಚನೆ ಮಾಡುವುದನ್ನು ರೂಢಿಯಲ್ಲಿಟ್ಟುಕೊಂಡಿದ್ದಾರೆ ಕೆಲವರು ಶುಕ್ರವಾರದಂದು ಲಲಿತಾ ಸಹಸ್ರನಾಮ ಅಷ್ಟೋತ್ತರ ಪೂಜೆ ಮಾಡುತ್ತಾರೆ ಈ ರೀತಿ ಶ್ರೀ ಚಕ್ರಪೂಜೆಯು ಒಂದಲ್ಲ ಒಂದು ರೀತಿ ದೇಶಾದ್ಯಂತ ಆಚರಣೆಯಲ್ಲಿದೆ ದಕ್ಷಿಣ ಬಾರತದಲ್ಲಿ ತಮಿಳುನಾಡಿನ ಕಾಂಚೀಪುರದ ದೇವಾಲಯ (ಕಾಮಕೋಟಿ), ಚಿದಂಬರಂ (ಸಮ್ಮೇಳನ ಚಕ್ರ), ಜಂಬುಕೇಶ್ವರಂ (ಲಲಿತಾ) ಕುಟ್ರಾಲಂ, ಅವಡೈಯ್ಯಾರ್ ಕೋಯಿಲ್ ಮುಂತಾದ ದೇವಾಲಯಗಳಲ್ಲಿ, ಕರ್ನಾಟಕದ ಶೃಂಗೇರಿ (ಶಾರದಾ) ಮತ್ತು ಮೂಕಾಂಬಿಕಾ (ಕೊಲ್ಲೂರು) ದೇವಾಲಯಗಳಲ್ಲಿ ಶ್ರೀಚಕ್ರ ಪೂಜೆಯು ಪ್ರಮುಖವಾಗಿದೆ

ಶ್ರೀಚಕ್ರ ಪೂಜಾಪದ್ಧತಿಗೆ ಸಂಬಂದಿಸಿದಂತ ದೇಶಾದ್ಯಂತ ಸುಮಾರು 50 ಕೇಂದ್ರಗಳಿವ ಅವುಗಳಲ್ಲಿ ಕಾಂಚೀಪುರಂ (ಕಾಮಾಕ್ಷಿ), ನೇಪಾಳ (ಕುಮಾರಿ), ಗುರ್ಜರ (ಅಂಬಾ), ಮಾಳವಾ (ಕಾಳಿಕಾ), ಪ್ರಯಾಗ (ಲಲಿತಾ), ವಾರಾಣಸೀ (ವಿಶಾಲಾಕ್ಷಿ), ವಿಂದ್ಯಾಚಲ (ವಿಂದ್ಯವಾಸಿನಿ), ಗಯಾ (ಮಂಗಳಾ -- ಚಂಡೀ), ಬಂಗ (ಸುಂದರಿ), ಕರವೀರ ಅದವಾ ಕೊಲ್ಲಾಪುರ (ಮಹಾಲಕ್ಷ್ಮಿ), ಅಸ್ಸಾಂ (ಗುಹ್ಯೇಶ್ವರೀ) ಮತ್ತು ಮಲಯಪರ್ವತಗಳು (ಬ್ರಾಮರಿ) -- ಈ ಹನ್ನೆರಡು ಕೇಂದ್ರಗಳು ಜನಪ್ರಿಯವಾಗಿವ

ಐಂ ತ್ರಿಪುರಾದೇವಿ ವಿದ್ಮಹೇ
ಕ್ಲೀಂ ಕಾಮೇಶ್ವರೀ ಚ ಧೀಮಹಿ
ಸೌಃ ತನ್ನಃ ಕ್ಲಿನ್ನಾ ಪ್ರಚೋದಯಾತ್
(ಶ್ರೀವಿದ್ಯಾ ಗಾಯತ್ರೀ)

(ವಿವಿದ ಮೂಲಗಳಿಂದ)

# ಆಚಾರ್ಯ ದ್ರೋಣ

## ಪುಸ್ತಕ ವಿಮರ್ಶೆ

ಮಹಾಭಾರತವೆನ್ನುವ ಬೃಹತ್ ಸಾಹಿತ್ಯ ಸಾಗರದಿಂದ ಈಗಾಗಲೇ ರಾಧೇಯ, ಧನಂಜಯ ಎಂಬ ಎರಡು ಕೃತಿಗಳನ್ನು ಹೆಕ್ಕಿವಾಚಕರ ಮಹಾಶಯರಿಗೆ ನೀಡಿರುವ ಆದ್ಯರಾಮಾಚಾರ್ಯರ, ಈ ಸರಣಿಯಲ್ಲಿ ಮೂರನೆಯದಾದ ಕೃತಿ 'ಆಚಾರ್ಯ ದ್ರೋಣ'

ದೂರದರ್ಶನದಲ್ಲಿ ರಾಮಾಯಣ, ಮಹಾಬಾರತಗಳು ಪ್ರಸಾರಗೊಂಡು ಯಶಸ್ಸನ್ನು ಕಂಡ ತರುವಾಯ ಆ ಎರಡೂ ಮಹಾಕಾವ್ಯಗಳಲ್ಲಿನ ಪ್ರಮುಖ ಪಾತ್ರಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸುವ ಕಾರ್ಯ ಸಾಕಷ್ಟು ತ್ವರಿತತೆಯನ್ನು ಪಡೆದುಕೊಂಡಿತೆನ್ನಬಹುದು

ಕನ್ನಡದಲ್ಲಿಯೂ ಸಹ ಕೆ ಎಸ್ ನಾರಾಯಣಾಚಾರ್ಯರು 'ತರಂಗ' ಸಾಪ್ತಾಹಿಕದಲ್ಲಿ ರಾಮಾಯಣ, ಮಹಾಬಾರತದ ಜೊತೆಗೆ ಚಾಣಕ್ಯದ ಪಾತ್ರ ಪ್ರಪಂಚಗಳನ್ನು ಸಂಕ್ಷಿಪ್ತವಾಗಿ ನೀಡುವ ಪ್ರಯತ್ನ ನಡೆಸಿ ಸಫಲರಾಗಿದ್ದಾರೆ

ಈ ದಿಸೆಯಲ್ಲಿ ಆದ್ಯರಾಮಾಚಾರ್ಯರದು ಸ್ವಲ್ಪ ದೊಡ್ಡ ಪ್ರಯತ್ನವನ್ನೇ ಕೈಗೊಂಡಿದ್ದಾರೆನ್ನಬಹುದಾದರೂ ಅವರು ಆಯ್ದುಕೊಂಡ ಕದಾವಸ್ತು ಬೃಹತ್ತಾಗಿದೆ

'ಆಚಾರ್ಯ ದ್ರೋಣ' ದಲ್ಲಿ ಆಗಿರುವುದೂ ಹೀಗೆಯೇ ದೂರದರ್ಶನದ ಮಹಾಬಾರತದ ಪ್ರೇರಣೆಯೋ ಎನ್ನುವಂತೆ ಕಾಲ ಕಾಲೇಶ್ವರನ ಆತ್ಮವೃತ್ತಾಂತದಿಂದ ಆರಂಭಗೊಳ್ಳುವ ಈ ಕೃತಿಯಲ್ಲಿ ಹಸ್ತಿನಾಪುರದ ಕಿರು ಪರಿಚಯದ ಬಳಿಕ ಆಚಾರ್ಯರ ಸ್ವಗತದ ರೂಪದಲ್ಲಿ ಮುನ್ನಡೆದರೂ, ಇದ್ದಕ್ಕಿದ್ದಂತೆ ಬೇರೆ ಶೈಲಿಯಲ್ಲಿ ಸಾಗುವುದು ಓದುಗರಲ್ಲಿ ಗೊಂದಲ ಮೂಡಿಸುತ್ತದೆ

ಭೌತಿಕ ಸುಖವನ್ನು ಬಯಸಿ, ದ್ರುಪದ ರಾಜನಿಂದ ಅಪಮಾನಿತನಾದೆನೆಂದು ಭ್ರಮಿಸಿ, ಗುರುದಕ್ಷಿಣೆಯ ರೂಪದಲ್ಲಿ ದ್ರುಪದನ ಹೆಡೆಮುರಿ ಕಟ್ಟಿಸುವ ಮತ್ತು ಧೃತರಾಷ್ಟ್ರನ ಪುತ್ರವಾತ್ಸಲ್ಯದ ದ್ಯೋತಕವಾಗಿ ಸೇನಾದಿಪತ್ಯ ವಹಿಸಿಕೊಳ್ಳುವವರೆಗಿನ ಸಾಧನೆಯನ್ನು ವಿವರಿಸುವ ಕೃತಿಯಲ್ಲಿ ದ್ರೋಣರೊಡನೆ ಉಳಿದ ಪಾತ್ರಗಳಿಗೂ ಅಧಿಕ ಅವಕಾಶವು ದೊರೆತಿದೆ

ಕುಂತಿಯನ್ನು ಕಾಣಲು ಬಂದ ಕೃತವರ್ಮ, ಆತನಿಂದ ಶ್ರೀಕೃಷ್ಣನ ಅದ್ಭುತ ವ್ಯಕ್ತಿತ್ವದ ಪರಿಚಯ, ದ್ರುಪದನ ಆಂತರಿಕ ತೊಳಲಾಟ, ಧೃತರಾಷ್ಟ್ರ -- ಗಾಂದಾರಿಯರು ತೋರುವ ಪುತ್ರ ವ್ಯಾಮೋಹಗಳಿಗೆ ಹೆಚ್ಚಿನ ಒತ್ತು ಕೊಟ್ಟಿರುವುದಾಗಿದೆ

ಮಹಾಭಾರತದ ಪ್ರಭಾವಿ ಪಾತ್ರಗಳಲ್ಲೊಂದಾದ ದ್ರೋಣರ ಬಾಲ್ಯದಿದ ಕುರುಕ್ಷೇತ್ರ ಸಂಗ್ರಾಮದಲ್ಲಿನ ಅವಸಾನದವರೆಗಿನ ಜೀವನಗಾಥೆಯ ರೂಪದಲ್ಲಿದ್ದರೆ ಸೊಗಸಾಗಿರಬಹುದಾಗಿದ್ದ ಈ ಕೃತಿಯಲ್ಲಿ ಅವರ ಸ್ವಾರ್ಥ, ಪುತ್ರ ವ್ಯಾಮೋಹ, ಭೌತಿಕ ಸುಖದ ಬಯಕೆ, ಮಾನವ ಸಹಜ ಕ್ರೋದಗಳನ್ನು ಪರಿಚಯಿಸಿದ ನಂತರ ನಿರೂಪಣಾ ವಿದಾನ ಬೇರೆಯಾಗುತ್ತದೆ

ಒ ಟ್ಟಾ ರೆ ಯಾ ಗಿ ಆದ್ಯರಾಮಾಚಾರ್ಯರ 'ಆಚಾರ್ಯ ದ್ರೋಣ' ರಸಪೂರ್ಣ ಕವಳವೇನೋ ಅಹುದು ಆದರೆ ಅದಕ್ಕೆ ಹಾಕಿರುವ ಹೂರಣದಲ್ಲಿ ಸ್ವಲ್ಪ ವ್ಯತ್ಯಾಸವಾಗಿರುವುದೂ ನಿಜ ಮುದ್ರಣ ದೋಷ ಕಡಮೆ ಪ್ರಮಾಣದಲ್ಲಿದೆ

---ಎಚ್. ಕೆ. ರಾಘವೇಂದ್ರ

**ಆಚಾರ್ಯ ದ್ರೋಣ :**

ಲೇಖಕರು : ಆದ್ಯರಾಮಾಚಾರ್ಯ,
ಪ್ರಕಾಶಕರು: ವರದ ರಾಜಪ್ರಕಾಶನ,
114 -- ವೈ. 4 ನೇ ರಸ್ತೆ, 4 ನೇ ಹಂತ,
7 ನೇ ಬ್ಲಾಕ್ ಬನಶಂಕರಿ -- 4 ನೇ ಘಟ್ಟ,
ಬೆಂಗಳೂರು -- 560085
ಪುಟ . 208 +16, ಬೆಲೆ ರೂ. 25--00

## ಶ್ರೀ ಗೋವಿಂದರಾಜಸ್ವಾಮಿ ದೇವಾಲಯ, ತಿರುಪತಿ

### ದರ್ಶನ ಹಾಗೂ ಸೇವಾ ವಿವಗಳು

| | ರಿಂದ | ವರೆಗೆ |
|---|---|---|
| ಸುಪ್ರಭಾತ | ಪ್ರಾ ೫ ೦೦ | ಪ್ರಾ ೫ ೩೦ |
| ವಿಶ್ವರೂಪ ಸರ್ವದರ್ಶನ* | ಪ್ರಾ ೫ ೩೦ | ಪ್ರಾ ೭ ೦೦ |
| ತೋಮಾಲ ಸೇವೆ (ಆರ್ಜಿತ) | ಪ್ರಾ ೭ ೩೦ | ಪ್ರಾ ೮ ೦೦ |
| ಅರ್ಚನೆ (ಆರ್ಜಿತ) | ಪ್ರಾ ೮ ೦೦ | ಪ್ರಾ ೮ ೩೦ |
| ಸರ್ವದರ್ಶನ | ಪ್ರಾ ೯ ೦೦ | ಮ ೧೨ ೩೦ |
| | ಮ ೧ ೦೦ | ಸಂ ೬ ೦೦ |
| | ರಾ ೭ ೦೦ | ರಾ ೮ ೪೫ |
| ಏಕಾಂತಸೇವೆ | | ರಾ ೯ ೦೦ಕ್ಕೆ |

* ಶುಕ್ರವಾರ, ಏಕಾದಶಿ, ಉತ್ತರಾನಕ್ಷತ್ರದ ದಿನ ಮತ್ತಿತರ ಹಬ್ಬ ಹರಿದಿನಗಳಲ್ಲಿ ವಿಶ್ವರೂಪ ಸರ್ವದರ್ಶನವು ಪ್ರಾ ೫ ೩೦ ರಿಂದ ಪ್ರಾ ೬ ೩೦ ರ ವರೆಗೆ ಮಾತ್ರ

### ಆರ್ಜಿತ ಸೇವೆಗಳು

| | | |
|---|---|---|
| ೧ | ಗರುಡವಾಹನ | ೩೨ ೦೦ |
| ೨ | ಚಂದ್ರಪ್ರಭ ವಾಹನ | ೩೨ ೦೦ |
| ೩ | ಗಜವಾಹನ | ೩೨ ೦೦ |
| ೪ | ಅಶ್ವವಾಹನ | ೩೨ ೦೦ |
| ೫ | ಸಿಂಹವಾಹನ | ೩೨ ೦೦ |
| ೬ | ಹಂಸವಾಹನ | ೩೨-೦೦ |
| ೭ | ಚಿಕ್ಕಶೇಷವಾಹನ | ೩೨ ೦೦ |
| ೮ | ದೊಡ್ಡ ಶೇಷವಾಹನ | ೬೨ ೦೦ |
| ೯ | ಸೂರ್ಯಪ್ರಭವಾಹನ | ೬೨ ೦೦ |

### ಪಡಿಪ್ರಸಾದಗಳು

| | | |
|---|---|---|
| ೧ | ದೋಸೆ, ಕಾಲಸೋಲ | ೩೫ ೦೦ |
| ೨ | ದಧ್ಯೋದನ " | ೪೦ ೦೦ |
| ೩ | ಪುಳಿಯೋಗರೆ " | ೫೦-೦೦ |
| ೪ | ಪೊಂಗಲು " | ೫೫ ೦೦ |
| ೫ | ಸಕ್ಕರೆಪೊಂಗಲ್ " | ೬೫ ೦೦ |
| ೬ | ಶಾಕರ ಭಾತ್ " | ೮೫ ೦೦ |
| ೭ | ಕೇಸರಿಭಾತ್ " | ೯೦ ೦೦ |
| ೮ | ಶೀರ " | ೧೫೫ ೦೦ |

ವಿವರಗಳಿಗೆ
**ಪೇಷ್ಕಾರ್**
ಶ್ರೀ ಗೋವಿಂದರಾಜಸ್ವಾಮಿ ದೇವಾಲಯ,
ತಿರುಪತಿ

# ಶ್ರೀನಿವಾಸನೆ...



**ಜಿ. ಎಸ್. ಗುಂಡಪ್ಪ.**

ಶ್ರೀನಿವಾಸನೆ ವೆಂಕಟೇಶನೆ
ಪದ್ಮನಾಭನೆ ಜಯಜಯ
ನಿನ್ನ ನಾಮವ ಜಪಿಸುತಿದ್ದರೆ
ನಮಗೆ ಸರ್ವದ ನಿರ್ಭಯ ೧

ಸಪ್ತಗಿರಿಯಲ್ಲಿ ಗುಪ್ತವಾಗಿಹೆ
ಭಕ್ತ ಕೋಟಿಯ ಸಲಹುತ
ವಿಶ್ವದಲ್ಲಿಯ ಜೀವರಾಶಿಗೆ
ಪ್ರಾಣಶಕ್ತಿಯ ನೀಡುತ ೨

ನಿನ್ನ ಭವ್ಯದ ಏಳುಮಲೆಯು
ಆಹ! ಎಂತಹ ಆಸರೆ!
ಹಿಗ್ಗಿ ನಲಿವರು ನಿನ್ನ ಭಕ್ತರು
ನಿನ್ನ ಸನ್ನಿದಿಯಲ್ಲಿರೆ ೩

ತೊಗಲ ಗೊಂಬೆಯ ಕುಣಿಸುವಂತೆ
ಸೂತ್ರ ದಾರನು ದಾರದಿ
ನೀನು ಆಡಿಸೆ ಜೀವರಾಶಿಯ
ನಾನ ಬಗೆಯಲಿ ವಿಶ್ವದಿ ೪

ಭಕ್ತಿ ಇಲ್ಲದ ಕೋಟ್ಯಧೀಶರ
ಹೆಸರು ಅಳಸಿ ಹೋಗಿದೆ!
ಬಡವರಿದ್ದಿಹ ನಿನ್ನ ಭಕ್ತರ
ಕೀರ್ತಿ ಇಂದಿಗು ಉಳಿದಿದೆ!! ೫

ನಿನ್ನ ಕೃಪೆಯನು ಗಳಿಸಿಕೊಂಡರೆ
ಹೆಳವ ಚೆಂಗನೆ ಹಾರುವ!
ಹುಟ್ಟು ಮೂಕನು ನುಡಿಯಬಲ್ಲನು!
ಶರಣು ಶರಣು ಮಾಧವ ೬

ನಿನ್ನ ದ್ಯಾನವ ಮಾಡುತಿದ್ದರೆ
ಭೂತಪ್ರೇತವು ಭಸ್ಮವು!
ನಿನ್ನ ಭಕುತಗೆ ಇರುವುದಿಲ್ಲವು
ಲೋಭ ಕ್ರೋದ ದುಃಖವು! ೭

ಬಡಕುಚೇಲನ ಎಂದು ಮರೆಯದ
ಬಾಲಕೃಷ್ಣನು ನೀನೆಯೆ!
ಶಬರಿ ಯೆಂಜಲ ಹಣ್ಣ ತಿಂದಿಹ
ರಾಮಚಂದ್ರನು ನೀನೆಯೆ! ೮

ನೀನೆ ತಂದೆಯು ನೀನ ತಾಯಿಯು
ನೀನೆ ಎನ್ನಯ ಸದ್ಗುರು
ನೀನೆ ಬ್ರಹ್ಮನು ನೀನೆ ವಿಷ್ಣುವು
ನೀನೆ ಗಣಪತಿ ರುದ್ರರು! ೯

ನಿನ್ನ ಗಿರಿಯನು ಹೋಲ್ವ ತಾಣವು
ಬೇರೆ ಇಲ್ಲವು ಜಗದಲಿ
ಸೌಖ್ಯ ಶಾಂತಿಯ ನೀನು ನೆಲಪೆ
ನಿನ್ನ ಭಜಿಸುವ ಜನರಲಿ ೧೦

ಕಪಟ ನಾಟಕ ಸೂತ್ರದಾರಿಯೆ
ಕೋಟಿ ಕೋಟಿ ವಂದನೆ!
ಶ್ರೀನಿವಾಸನೆ ವೆಂಕಟೇಶನೆ
ರಾಮಚಂದ್ರನ ಕೃಷ್ಣನ ೧೧

ನಾನು ಶ್ರೇಷ್ಠ ಭಕ್ತನೆಂಬುವ
ಜಂಬವೆನಗೆ ಕೊಡದಿರು!
ಏತಕೆಂದರೆ ನನ್ನ ಭಕ್ತಿಯು
ಕಸಿಯ ಬಲ್ಲೆಯೊ ಸದ್ಗುರು! ೧೨

* * * * *

# ಗಾವಃ -- ಸರ್ವಭೂತಾನಾಂ ಮಾತರಃ

ವಿ. ಕೆ. ವಿಶ್ವೇಶ್ವರ.

ಆ ಬೆಸ್ತರು ಗಂಗಾನದಿಯಲ್ಲಿ ಮೀನು ಹಿಡಿಯುವುದಕ್ಕಾಗಿ ಬಲೆಯನ್ನು ಹರಡಿದರು ತುಂಬಾ ಮೀನುಗಳು ಸಿಕ್ಕಿಬಿದ್ದಿರಬಹುದೆಂಬ ಆಶೆಯಲ್ಲಿ ಬಲೆಯನ್ನೆತ್ತಿ ತೆಗೆದರು ಏನಾಶ್ಚರ್ಯ! ಬಲೆಯಲ್ಲಿ ಮೀನುಗಳ ಜತೆಗೆ ಓರ್ವ ಮಹರ್ಷಿಗಳೂ ಸಿಕ್ಕಿಬಿದ್ದಿದ್ದಾರೆ! ಬೆಸ್ತರು ಭೀತಿಯಿಂದ ನಡುಗುತ್ತಾ ಅವರಿಗೆ ಪ್ರಣಾಮಗೈದು ತಮ್ಮನ್ನು ಮನ್ನಿಸಬೇಕೆಂದು ಬೇಡಿಕೊಂಡರು ಮಹಾನ್ ತಪಸ್ವಿಗಳೂ, ವೇದ ವೇದಾಂತ ಕೋವಿದರೂ ಆದ ಆ ಮಹರ್ಷಿ ಚ್ಯವನರು ನಗುತ್ತಾ ಹೇಳಿದರು -- "ಇದರಲ್ಲಿ ನಿಮ್ಮದೇನೂ ತಪ್ಪಿಲ್ಲ ಗಂಗೆಯಲ್ಲಿ ಮುಳುಗಿ ತಪವನ್ನಾಚರಿಸುತ್ತಿದ್ದುದರಿಂದ ನಾನು ಸಿಕ್ಕಿ ಬಿದ್ದೆ ಮೀನುಗಳನ್ನು ಮಾರಿಯೇ ನಿಮ್ಮ ಜೀವನ ಸಾಗಬೇಕಲ್ಲವೇ? ಆದ್ದರಿಂದ ಈ ಮೀನುಗಳ ಜತೆ ನನ್ನನ್ನೂ ಮಾರಿಬಿಡಿ" ಅಂತ! ಬೆಸ್ತರಿಗೆ ಮತ್ತೆ ಪೇಚಾಟ ಚ್ಯವನರೇ ತಮ್ಮನ್ನು ರಾಜಾ ಸುದಾಸನಿಗೆ ಮಾರಲು ಹೇಳಿದರು ಬೆಸ್ತರು ಹಾಗೆಯೇ ಮಾಡಿದರು ಆದರೆ ಮಹರ್ಷಿಗಳ ಬೆಲೆ ಎಷ್ಟು? ಎಂಬುದು ಮಾತ್ರ ಸಮಸ್ಯೆಯಾಗಿ ಬೆಳೆಯಿತು ಮೊದಲು, ಒಂದು ಗ್ರಾಮವನ್ನು ಕೊಡುತ್ತೇನೆಂದ ರಾಜ ಚ್ಯವನರು "ಊಹೂಂ " ಅಂದರು ಮತ್ತೆ ಸಾವಿರ ಗ್ರಾಮಗಳನ್ನು ಕೊಡುವುದಾಗಿ ಹೇಳಿದ ಅದಕ್ಕೂ ಒಪ್ಪಲಿಲ್ಲ ಚ್ಯವನರು ಕೊನೆಗೆ ತನ್ನ ಇಡೀ ರಾಜ್ಯವನ್ನೇ ಚ್ಯವನರ ಬಿಡುಗಡೆಗಾಗಿ ಕೊಡುವೆನೆಂದು ರಾಜ ಹೇಳಿದ ಚ್ಯವನರಿಗೆ ಕೋಪ ಬಂತು "ಮಹರ್ಷಿಯಾದ ನನ್ನ ಬೆಲೆ ಇದುವೇ? ವೇದಗಳ ಜ್ಞಾನವನ್ನೂ ತಪಶ್ಚರ್ಯೆಯ ಶಕ್ತಿಯನ್ನೂ ಹೃದಯದಲ್ಲಿ ಹೊಂದಿರುವ ನನ್ನ ನಿಜಮೌಲ್ಯವನ್ನು ನಿನ್ನ ಮಂತ್ರಿಗಳು, ರಾಜಪುರೋಹಿತರು, ವಿದ್ವಾಂಸರುಗಳೆಲ್ಲರ ಸಲಹ ಕೇಳಿ ನಿರ್ಧರಿಸು" ಎಂದು ಆದೇಶಿಸಿದರು ಅವರೆಲ್ಲರೂ ಮಂತ್ರಾಲೋಚನೆ ನಡೆಸಿದರು ಕೊನೆಗೆ ಶಾಸ್ತ್ರವಚನವೊಂದು ಅವರ ನೆರವಿಗೆ ಬಂತು

"ಬ್ರಾಹ್ಮಣಾಶ್ಚೈವ ಗಾವಶ್ಚ
ಕುಲಮೇಕಂ ದ್ವಿಧಾ ಕೃತಂ
ಏಕತ್ರ ಮಂತ್ರಾಃ ತಿಷ್ಠಂತಿ
ಹವಿರೇಕತ್ರ ತಿಷ್ಠತಿ

ಹೀಗೆ, ಒಂದೆಡೆ ಮಂತ್ರಗಳನ್ನೂ ಒಂದೆಡೆ ಹವಿಸ್ಸನ್ನೂ ತಮ್ಮ ಜೊತೆ ಹೊಂದಿರುವ ಬ್ರಾಹ್ಮಣ ಮತ್ತು ಗೋವುಗಳು ಶ್ರೇಷ್ಠತೆ ಯಲ್ಲಿ ಸಮತೂಕದವುಗಳು ಎಂಬ ನಿರ್ಧಾರಕ್ಕೆ ಬಂದ ಆಸ್ಥಾನದ ಬ್ರಾಹ್ಮಣರು ಅದನ್ನು ಚ್ಯವನರಿಗೆ ತಿಳಿಸಿದರು "ಹೌದು ಗೋವೇ ನನ್ನ ನಿಜವಾದ ಮೌಲ್ಯ" ಎಂದರು ಆ ತಪಸ್ವಿಗಳು ಅದರಂತೆಯೇ ಒಂದು ದನವನ್ನು ಬೆಸ್ತರಿಗೆ ನೀಡುವ ಮೂಲಕ ರಾಜಾ ಸುದಾಸನು ಚ್ಯವನರನ್ನು ಮುಕ್ತಗೊಳಿಸಿದನು

ಇಂತಹ ಹಲವು ಉಪಾಖ್ಯಾನಗಳು ರಾಮಾಯಣ -- ಮಹಾಭಾರತಗಳಲ್ಲಿ, ಇತರ ಪುರಾಣಗಳಲ್ಲಿ ದೊರೆಯುತ್ತವೆ ಅವೆಲ್ಲ ಗೊಮಾತೆಯ ದೈವತ್ವವನ್ನೂ, ಪೂಜಾರ್ಹತೆಯನ್ನೂ ಒತ್ತಿ ಹೇಳುತ್ತವೆ ಮನುಷ್ಯನ ದಿನನಿತ್ಯದ ಚಟುವಟಿಕೆಗಳಲ್ಲಿ ಇತರೆಲ್ಲ ಪ್ರಾಣಿಗಳಿಗಿಂತ ಗೋವು ಹೇಗೆ ವಿಶಿಷ್ಟವಾಗಿ ಮತ್ತು ಮಹತ್ವ ಪೂರ್ಣವಾಗಿ ಒದಗುತ್ತದೆ ಎಂಬುದನ್ನು ಗಮನಿಸಿದರೆ ಅಂತಹ ಕಥೆಗಳ ಅಂತರಾಳ ಅರ್ಥವಾಗದಿರದು ಪೃಥ್ವಿಯು ಈ ಸಮಸ್ತ ಜೀವಜಾಲವನ್ನು ಹೊತ್ತಿರಲು ಸಾಧ್ಯವಾದುದೇ ಗೋವಿನಂತಹ ಶ್ರೇಷ್ಠ ಜೀವಿಗಳಿರುವುದರಿಂದ

"ಗೋಭಿಃ ವಿಪ್ರೈಶ್ಚ ವೇದೈಶ್ಚ
ಸತೀಭಿಃ ಸತ್ಯವಾದಿಭಿಃ
ಅಲಬ್ಧೈಃ ದಾನಶೀಲೈಶ್ಚ
ಸಪ್ತಭಿಃ ಧಾರ್ಯತೇ ಮಹೀ

"ಗೋವುಗಳು, ಬ್ರಾಹ್ಮಣರು, ವೇದಗಳು, ಸತಿಯರು, ಸತ್ಯವಂತರು, ಯಾಚಕರಲ್ಲದವರು ಮತ್ತು ದಾನಶೀಲರು -- ಈ ಏಳು ಮಂದಿಯಿಂದಾಗಿ ಭೂಮಿಗ ಅಪೂರ್ವವಾದ ಧಾರಣಾಶಕ್ತಿಯು ಬಂದಿದೆ"

'ಏತದ್ ವೈ ವಿಶ್ವರೂಪಂ ಸರ್ವರೂಪಂ ಗೋರೂಪಂ' ಎಂಬ ಮಾತಿನಂತೆ ಸರ್ವದಾ ಪೂಜ್ಯಳಾದ ಗೋಮಾತೆಯ ಸರ್ವದೇವಮಯ ಸ್ವರೂಪದ ಬಗ್ಗೆ ಮಹಾಭಾರತದ ಅಶ್ವಮೇಧಪರ್ವದಲ್ಲಿ ಹೇಳಲಾಗಿದೆ

ಶೃಂಗಮಧ್ಯೇ ತಥಾ ಬ್ರಹ್ಮಾ
ಲಲಾಟೇ ಗೋಃ ವೃಷಧ್ವಜಃ
ಕರ್ಣಯೋರಶ್ವಿನೌ ದೇವೌ
ಚಕ್ಷುಷೀ ಶಶಿಭಾಸ್ಕರೌ
ಸಾಧ್ಯಾ ದೇವಾಃ ಸ್ಥಿತಾಃ ಕಕ್ಷೇ
ಗ್ರೀವಾಯಾಂ ಪಾರ್ವತೀ ಸ್ಥಿತಾ
ಪೃಷ್ಠೇ ಚ ನಕ್ಷತ್ರಗಣಾಃ
ಕಕುದ್ದೇಶೇ ನಭಃಸ್ಥಲಂ
ಅಷ್ಟೈಶ್ವರ್ಯ ಮಯೀ ಲಕ್ಷ್ಮೀಃ
ಗೋಮಯೇ ವಸತೇ ಸದಾ
ಚತ್ವಾರಃ ಸಾಗರಾಃ ಪೂರ್ಣಾಃ
ತಸ್ಯಾ ಏವ ಪಯೋದರಾಃ

ಶೃಂಗಗಳ ನಡುವಿನಲ್ಲಿ ಬ್ರಹ್ಮ, ಹಣೆಯಲ್ಲಿ ಈಶ್ವರ, ಕಿವಿಗಳಲ್ಲಿ ಅಶ್ವಿನೀ ದೇವತೆಗಳು, ಕಂಗಳಲ್ಲಿ ಸೂರ್ಯಚಂದ್ರರು, ಕಕ್ಷದಲ್ಲಿ ಸಾಧ್ಯ ದೇವತೆಗಳು, ಕಂಠದಲ್ಲಿ ಪಾರ್ವತಿ, ಪೃಷ್ಠದಲ್ಲಿ ನಕ್ಷತ್ರಗಣಗಳು, ಗೂನಿನಲ್ಲಿ ಆಕಾಶ, ಗೋಮಯದಲ್ಲಿ ಅಷ್ಟೈಶ್ವರ್ಯ ಲಕ್ಷ್ಮಿ, ಸ್ತನಗಳಲ್ಲಿ ನಾಲ್ಕು ಸಾಗರಗಳು -- ಹೀಗೆ ಸರ್ವತ್ರ ಮಹಿಮಾಸಂಪೂರ್ಣವಾಗಿದೆ ಗೋವು.

ದೇವತೆಗಳಿಗೆ ನೀಡಲಾಗುವ ಹವಿಸ್ಸನ್ನು ತಯಾರು ಮಾಡಿಕೊಡುವುದು ಹಸು ಆದ್ದರಿಂದ "ಹವಿರ್ದುಘಾ" ಎಂಬ ಹೆಸರೂ ಅದಕ್ಕಿದೆ ಯಜ್ಞದ ಪ್ರತಿಷ್ಠೆಗೂ, ಯಶಸ್ಸಿಗೂ ಗೋವೇ ಕಾರಣ -- "ಗಾವೋ ಯಜ್ಞಸ್ಯ ಹಿ ಫಲಂ ಗೋಷು ಯಜ್ಞಾಃ ಪ್ರತಿಷ್ಠಿತಾಃ" ಯಜ್ಞದ ವೇದಿಕೆಯನ್ನು ಸ್ವಚ್ಛವಾಗಿ ನಿರ್ಮಿಸುವುದಕ್ಕೆ ಗೋಮಯ ಬೇಕು ಯಜ್ಞಾಗ್ನಿಯನ್ನು ಉರಿಸಲು ಅದರಿಂದ ತಟ್ಟಿದ ಬೆರಣಿಗಳು ಬೇಕು

ಗೋಮಾತೆ ನಮ್ಮ ಸಂಸ್ಕೃತಿಯ ಬೆನ್ನೆಲುಬಾಗಿದೆ "ಮಾತರಃ ಸರ್ವಭೂತಾನಾಂ ಗಾವಃ" ಎಂಬ ಉಕ್ತಿಯಂತೆ ಸಮಸ್ತ ಜೀವಿಗಳಿಗೆ ಜನನಿಯಾಗಿದೆ ಆದ್ದರಿಂದ ಲೋಕ ಪಿತಾಮಹ ಬ್ರಹ್ಮ ಲೋಕಪಾಲಕ ವಿಷ್ಣು, ಜಗದೊಡೆಯ ಪರಮೇಶ್ವರ -- ಮೂವರೂ ಸೇರಿ ಕಾಮಧೇನುವನ್ನು ಸ್ತುತಿಸುವ ಪರಿ ಇದು

"ತ್ವಂ ಮಾತಾ ಸರ್ವದೇವಾನಾಂ
ತ್ವಂ ಚ ಯಜ್ಞಸ್ಯ ಕಾರಣಂ
ತ್ವಂ ತೀರ್ಥಂ ಸರ್ವತೀರ್ಥಾನಾಂ
ನಮಸ್ತೇಽಸ್ತು ಸದಾನಘೇ"

ಅಂತಹ ಗೋಮಾತೆಯ ಸೇವೆಯಿಂದ ಸೌಭಾಗ್ಯದ ಬಾಗಿಲು ತೆರೆಯುತ್ತವ ಭಗವತ್ ಪ್ರಾಪ್ತಿಯ ಹಾದಿ ಸುಗಮವಾಗುತ್ತದೆ ನಂದಿನಿಯೆಂಬ ಧೇನುವಿನ ಸೇವೆಯಿಂದ ಮಹಾರಾಜ ದಿಲೀಪನಿಗೆ ರಘುವಿನಂತಹ ಶ್ರೇಷ್ಠ ಪುತ್ರನ ಜನನವಾಯಿತು ಗೋಸೇ

ವೆಯಿಂದಾಗಿ ದ್ಯುಮತ್ಸೇನನ ಮಗನಾದ ಸತ್ಯವಾನನ ಅಲ್ಪಾಯುಸ್ಸೂ ದೀರ್ಘಾಯುಷ್ಯವಾಗಿ ಬದಲಾಯಿತು ಹೀಗೆ ದೇನುವಿನ ಸೇವೆಯು ಅದ್ಭುತವಾದ ಫಲಕಾರಿಯಾದುದು, ಪುಣ್ಯಪ್ರದವಾದುದು

ತೀರ್ದಸ್ನಾನೇಷು ಯತ್ ಪುಣ್ಯಂ
ಯತ್ ಪುಣ್ಯಂ ವಿಪ್ರಭೋಜನೇ
ಯತ್ ಪುಣ್ಯಂ ಚ ಮಹಾದಾನೇ
ಯತ್ ಪುಣ್ಯಂ ಹರಿಸೇವನೇ
ಸರ್ವ ವ್ರತೋಪವಾಸೇಷು
ಸರ್ವೇಷ್ವೇವ ತಪಃ ಸು ಚ
ಭೂಮಿಪರ್ಯಟನೇ ಯತ್ತು
ಸತ್ಯವಾಕ್ಯೇಷು ಯದ್ ಭವೇತ್
ಯತ್ಪುಣ್ಯಂ ಸರ್ವ ಯಜ್ಞೇಷು
ದೀಕ್ಷಾಯಾಂ ಚ ಲಭೇನ್ನರಃ
ತತ್ ಪುಣ್ಯಂ ಪ್ರಾಪ್ಯತೇ ಸದ್ಯಃ
ಕೇವಲಂ ದೇನುಸೇವಯಾ

ತೀರ್ದ ಸ್ನಾನ, ಬ್ರಾಹ್ಮಣಬೋಜನ, ಮಹಾದಾನ, ದೇವತಾಸೇವೆ, ಸಕಲ ವ್ರತ-- ಉಪವಾಸಗಳು, ತಪಸ್ಸುಗಳು, ಪ್ರಪಂಚ ಪರ್ಯಟನ, ಸತ್ಯವಾಚನ, ಸಕಲ ಯಜ್ಞದೀಕ್ಷೆಗಳು -- ಇವುಗಳಿಂದೆಲ್ಲ ಮನುಷ್ಯನಿಗೆ ಸಿಗುವಂದ ಪುಣ್ಯವು ಕೇವಲ ದೇನುಸೇವೆಯಿಂದ ಲಭ್ಯವಾಗುತ್ತದೆ

ಗವಾಂ ಸೇವಾ ತು ಕರ್ತವ್ಯಾ
ಗೃಹಸ್ಥೈಃ ಪುಣ್ಯಲಿಪ್ಸುಬಿಃ
ಗವಾಂ ಸೇವಾಪರೋ ಯಸ್ತು
ತಸ್ಯ ಶ್ರೀರ್ವರ್ಧತೇs ಚಿರಾತ್

ಆಸ್ತಿಕ ಮಹಾಶಯರ ನಂಬಿಕೆ ಎಲ್ಲಿಯವರೆಗೆ ವಿಸ್ತರಿಸುತ್ತದೆಯೆಂದರೆ ಕನಸಿನಲ್ಲಿ ಗೋಮಾತೆಯ ದರ್ಶನವಾದರೆ ಅದು ಮಂಗಲಕಲವೂ ರೋಗನಾಶಕವೂ ಆಗಿರುತ್ತದೆಯಂತೆ ಪ್ರಯಾಣದ ಸಮಯದಲ್ಲಿ ಆಕಳು ಎದುರಾದರೆ ಕಾರ್ಯಸಿದ್ಧಿಯಾಗುವುದಂತೆ ಅಂತೆಯೇ ಮನಸ್ಸಿನಲ್ಲಿ ದುಗುಡದುಮ್ಮಾನಗಳು ಕೊರೆಯತೊಡಗಿದರೆ ಗೋಮಾತೆಯ ಧ್ಯಾನದಿಂದ ಕಾಂತಿಯನ್ನು ಪಡೆಯಬಹುದು

ದೀಪಾವಳಿ ಹಬ್ಬದ ಮೂರನೆಯ ದಿನವಾದ ಬಲಿಪಾಡ್ಯಮಿಯಂದು ವಿಶೇಷವಾಗಿ ಗೋಪೂಜೆಯನ್ನು ನಡೆಸುವ ಕ್ರಮವಿದೆ ಆ ದಿನದಂದು ಧೇನುವಿಗೆ ಎಣ್ಣೆ ಹಚ್ಚಿ ಸ್ನಾನ ಮಾಡಿಸಿ, ಹೂ--ಗಂದಾಕ್ಷತೆಗಳಿಂದ ಶೃಂಗರಿಸಿ,

"ಸುರಭೀ ವೈಷ್ಣವೀ ಮಾತಾ
ನಿತ್ಯಂ ವಿಷ್ಣುಪದೇ ಸ್ಥಿತಾ
ಗೋಗ್ರಾಸಂ ತು ಮಯಾ ದತ್ತಂ
ಸುರಭಿಃ ಪ್ರತಿಗೃಹ್ಯತಾಂ"

ಎಂದು ಪ್ರಾರ್ದಿಸಿ ದೆಳ್ಳಿಗೆ ಅಕ್ಕಿಯ ಅನ್ನ ಅಥವಾ ಕೊಟ್ಟಿಗೆ--ಕಡುಬುಗಳ ನೈವೇದ್ಯವನ್ನು ಸಮರ್ಪಿಸುತ್ತಾರೆ

ಎಲ್ಲಿ ಗೋ ಸಂಕುಲವು ನಿರ್ಭಯದಿಂದ ಶ್ವಾಸವನ್ನು ತೆಗೆದುಕೊಳ್ಳುತ್ತಿರುವುದೋ, ಅಂದ ಶೋಭಾಯಮಾನವಾದ ಪ್ರದೇಶದಿಂದ ಪಾಪಗಳು ದೂರ ಓಡುವವು.

ನಿವಿಷ್ಟಂ ಗೋಕುಲಂ ಯತ್ರ
ಶ್ವಾಸಂ ಮುಂಚತಿ ನಿರ್ಭಯಂ
ವಿರಾಜಯತಿ ತಂ ದೇಶಂ
ಪಾಪಂ ಚಾ ಸ್ಯಾಪಕರ್ಷತಿ

ಹಾಗಿಲ್ಲದೆ, ಹಸುಗಳು ಕಷ್ಟಪಡುತ್ತಿರುವ ಸ್ಥಳ, ಯಾವುದೇ ಆಗಿರಲಿ, ಅಲ್ಲಿ ಏಳಿಗೆಯ ಕುರುಹಿರುವುದಿಲ್ಲ, ಅದು ನರಕ ಸದೃಶವಾಗಿರುತ್ತದೆ "ಯದ್ ಗೃಹೇ ದುಃಖಿತಾ ಗಾವಃ ಸ ಯಾತಿ ನರಕಂ ನರಃ" ಎಂಬ ಮಾತು ಗೋವುಗಳ ದುಃಖವು ಗೃಹಕ್ಕೇ ಶಾಪವಾಗಿ ಬಿಡುತ್ತದೆಯೆಂಬುದನ್ನು ಸ್ಪಷ್ಟಪಡಿಸುತ್ತದೆ

ಹಾಲು, ಮೊಸರು, ತುಪ್ಪ, ಸೆಗಣಿ (ಗೋಮಯ), ಗಂಜಲ (ಗೋಮೂತ್ರ--ಗಂಗಾಜಲದಂತೆ ಪವಿತ್ರ) -- ಈ ಐದು ವಸ್ತುಗಳ ಮಿಶ್ರಣವಾದ 'ಪಂಚಗವ್ಯ'ವು ಶುದ್ಧಿಕಾರಕವೂ, ಕ್ರಿಮಿನಾಶಕವೂ, ಆರೋಗ್ಯ--ಐಶ್ವರ್ಯ ಸಂಪದಗಳನ್ನು ನೀಡುವಂತಹುದೂ ಆಗಿದೆ ಶಾಸ್ತ್ರೋಕ್ತವಾದ ಶುದ್ದೀಕರಣ ಕಾರ್ಯಗಳಲ್ಲಿ ಅದು ಬೇಕೇ ಬೇಕು

ವ್ಯಾವಹಾರಿಕವಾಗಿ ಮತ್ತು ಆರ್ಥಿಕವಾಗಿಯೂ ದೇನುವು ಮಹತ್ವಪೂರ್ಣವಾಗಿದೆ ಅಂತಹ ಸಾತ್ವಿಕ ಮನೋದರ್ಮದ ಪರೋಪಕಾರಿಯನ್ನು ಕಂಡೇ ಕನ್ನಡದ ಕವಿಯೋರ್ವರು, "ಇಟ್ಟರೆ ಸೆಗಣಿಯಾದೆ, ತಟ್ಟಿದರೆ ಕುರುಳಾದೆ ನೀನಾರಿಗಾದೆಯೋ ಎಲೆ ಮಾನವಾ?" ಎಂದು ಉದ್ಗರಿಸಿದ್ದು ಮನುಷ್ಯನಿಗೆ ದನದ ಹಾಲು ಪೌಷ್ಟಿಕತೆಯಲ್ಲೂ, ಶ್ರೇಷ್ಠತೆಯಲ್ಲೂ, ಆರೋಗ್ಯದಾಯಿತ್ವದಲ್ಲೂ ತಾಯಿಯ ಎದೆಹಾಲಿಗೆ ಮಾತ್ರ ದ್ವಿತೀಯವಾಗಿರುವಂಥದ್ದು ಬೆಣ್ಣೆ, ಮೊಸರು, ತುಪ್ಪ -- ಇತ್ಯಾದಿ ಆಹಾರ ವಸ್ತುಗಳೂ ದಿನಿತ್ಯ ಬೇಕಾದಂದವು. ಗೋಮಯ -- ಗೋಮೂತ್ರಗಳಿಂದ ಕೂಡಿದ ಗೊಬ್ಬರವು ಕೃಷಿ ಕೆಲಸಗಳಿಗೆ ಅತ್ಯಂತ ನೈಜ-- ಸಮೃದ್ಧ ಪದಾರ್ಥವಾಗಿದೆ ಸಿಮೆಂಟಿನ ಸಾರಣೆಯಿಲ್ಲದೆ ಇರುವ ಮನೆಗಳ ಕೊರಡಿಗಳನ್ನು ಸಾರಿಸಲು ಸಗಣಿ ಅತ್ಯುಪಯುಕ್ತ ಒಂದೇ, ಎರಡೇ, ಗೋವಿನಿಂದ ದೊರೆವ ಎಲ್ಲ ವಸ್ತುಗಳೂ ಉಪಯುಕ್ತತೆಯನ್ನು ಮೆರೆಯುವಂಥವುಗಳು ಆದ್ದರಿಂದಲೇ ಹಿಂದಿನ ಶಾಸ್ತ್ರಕಾರರು "ಧನಂ ಚ ಗೋಧನಂ, ಧಾನ್ಯಂ ಸ್ವರ್ಣಾದಯೋ ವೃಥೈವ ಹಿ" ಎಂಬುದಾಗಿ ಹೇಳಿ, ವಾಣಿಜ್ಯ ವ್ಯವಸ್ಥೆಯ ಬುನಾದಿಯೇ ಗೋವು ಎಂದು ಸಾರಿದ್ದಾರೆ

ಬಗವಾನ್ ಶ್ರೀಕೃಷ್ಣನು ತನ್ನ ಅವತಾರಕಾಲದ ಬಹ್ವಂಶವನ್ನೂ ಗೋವುಗಳ ಜತೆಯಲ್ಲೇ ಕಳೆದನು -- ಗೋವಳನಾಗಿ, ಗೋಪಾಲನಾಗಿ, ಗೋವಿಂದನಾಗಿ, ಗೋವರ್ದನಗಿರಿದಾರಿಯಾಗಿ ಗೋವುಗಳೊಡನೆ ಎಂದ ಪುಣ್ಯಸಂಸರ್ಗ ಆತನದು!

ಗಾವೋ ಮಮಾಗ್ರತಃ ಸಂತು
ಗಾವೋ ಮೇ ಸಂತು ಪೃಷ್ಠತಃ
ಗಾವೋ ಹೃದಯೇ ಸಂತು
ಗವಾಂ ಮದ್ಯೇ ವಸಾಮ್ಯಹಂ

"ನನ್ನ ಹಿಂದೆ, ಮುಂದೆ, ನಾಲ್ಕೂ ಕಡೆಗಳಲ್ಲಿ ಹಸುಗಳಿರಲಿ ಸದಾ ದೇನುಗಳ ನಡುವೆಯೇ ಇರಲು ನಾನು ಇಷ್ಟಪಡುತ್ತೇನೆ" ಎಂದು ಹೇಳಿದನವನು ಅದಕ್ಕೇ, ನಾವೂ ಸ್ತುತಿಸೋಣ

ನಮೋ ಗೋಭ್ಯಃ ಶ್ರೀಮತೀಭ್ಯಃ
ಸೌರಭೇಯಿಭ್ಯ ಏವ ಚ
ನಮೋ ಬ್ರಹ್ಮಸುತಾಭ್ಯಶ್ಚ
ಪವಿತ್ರಾಭ್ಯೋ ನಮೋ ನಮಃ

ಜತೆಯಲ್ಲಿಯೇ ಪೂಜ್ಯಳೂ, ವಂದ್ಯಳೂ, ಸ್ತುತ್ಯಳೂ ಆದ ಗೋಮಾತೆ ಸದಾ ಪಾಲನೀಯಳು, ಎಂದಿಗೂ ಹತ್ಯಾರ್ಹಳಲ್ಲ ಎಂಬುದನ್ನು ಮರೆಯದಿರೋಣ



# ಶ್ರೀ ಪರಾಶರ ಮಹರ್ಷಿ

---ಕಂದಾಡೈ ಕೇಶವನ್.

## ಜನನ :

ಬ್ರಹ್ಮರ್ಷಿ ವಶಿಷ್ಠರ ಪುತ್ರರು ಶಕ್ತಿಮಹರ್ಷಿ, ಈತ ಮಹಾತಪಸ್ವಿ ಸಕಲ ವೇದಶಾಸ್ತ್ರಗಳಲ್ಲಿ ಪಾರಂಗತ ಪರಮ ಧರ್ಮಗಳನ್ನು ಸ್ಮೃತಿ ಸಂಹಿತೆಗಳನ್ನು ಸಾಂಗವಾಗಿ ಉಪದೇಶಮಾಡುವುದರಲ್ಲಿ ಪ್ರವೀಣ ಶಕ್ತಿಯ ಪತ್ನಿ ಅದೃಶ್ಯಂತಿ ಈಕೆ ಗರ್ಭದಾರಣೆ ಮಾಡಿರುವ ಸಮಯ ಹಿಂದೆ ಕೆಲವು ದಿನಗಳ ಹಿಂದೆ ಸೂರ್ಯವಂಶದ ಸುದಾಸನ ರಾಜನಿಗೆ ಕಲ್ಮಾಷಪಾದನೆಂಬ ಮಗನಿದ್ದನು ಅವನಿಗೆ ಮಿತ್ರಸಹ ಎಂಬುವ ಪೂರ್ವದಲ್ಲಿ ಹೆಸರಿತ್ತು ಮಿತ್ರಸಹ ಒಮ್ಮೆ ಬೇಟೆಗೆ ಹೋಗಿದ್ದಾಗ ಮಿಥುನದಲ್ಲಿ ಪ್ರವರ್ತಕವಾಗಿದ್ದ ಹೆಣ್ಣು ಹುಲಿಯನ್ನು ತನ್ನ ಬಾಣದಿಂದ ಕೊಲ್ಲಲು, ಗಂಡು ಹುಲಿಯು ತಪ್ಪಿಸಿಕೊಂಡು ಹೋಯಿತು ಆ ಗಂಡು ಹೆಣ್ಣು ರಾಕ್ಷಸರಾಗಿದ್ದೂ ಹುಲಿಯರೂಪದರಿಸಿ ಮೈಮರೆತು ಕ್ರೀಡಿಸುತ್ತಿದ್ದರು ಪತ್ನಿಯ ಮರಣದಿಂದ ಕ್ರುದ್ಧನಾದ ರಾಕ್ಷಸನು ರಾಜನ ಮೇಲೆ ಸೇಡು ತೀರಿಸಿಕೊಳ್ಳಲು ಕಾಯುತ್ತಿದ್ದನು ಒಮ್ಮೆ ಮಿತ್ರಸಹನು ವಶಿಷ್ಠರ ಮೂಲಕ ಒಂದು ಯಜ್ಞವನ್ನು ಮಾಡಲು ಉದ್ಯುಕ್ತನಾದನು ರಾಜನ ಮೇಲೆ ಸೇಡು ತೀರಿಸಿಕೊಳ್ಳಲು ಇದೇ ಸುಸಮಯವೆಂದು ತಿಳಿದ ರಾಕ್ಷಸನು ಮಾಂಸದ ಭಕ್ಷ್ಯಭೋಜ್ಯಗಳನ್ನು ತಯಾರಿಸಿ ವಶಿಷ್ಠರಿಗೆ ಬಡಿಸಿದನು ವಶಿಷ್ಠರು ಊಟಕ್ಕೆ ಕುಳಿತಾಗ ಬಡಿಸಿದ ಮಾಂಸವನ್ನು ಕಂಡು ಕುಪಿತರಾಗಿ ಮಿತ್ರಸಹನನ್ನು ಕುರಿತು "ನೀನು ೧೨ ವರ್ಷಗಳ ಕಾಲ ಮಾಂಸಭಕ್ಷಕನಾಗಿ ರಾಕ್ಷಸನಾಗಿರು ಎಂಬುವುದಾಗಿ ಶಾಪವಿತ್ತರು ರಾಜನು ತಾನು ನಿರಪರಾದಿಯೆಂದು ಎಷ್ಟು ಬೇಡಿಕೊಂಡರೂ ವಶಿಷ್ಠರ ಕೋಪ ಶಮನವಾಗಲಿಲ್ಲ ರಾಜನೂಕೂಡ ವಶಿಷ್ಠರಿಗೆ ಪ್ರತಿಶಾಪವನ್ನು ಕೊಡಲು ಕೈಯ್ಯಲ್ಲಿ ನೀರನ್ನು ತೆಗೆದುಕೊಳ್ಳುವಷ್ಟರಲ್ಲಿ ರಾಜನ ಪತ್ನಿ ಮದಯಂತಿ ರಾಜನನ್ನು ತಡೆಯಲು ಆ ನೀರನ್ನು ತನ್ನ ಕಾಲ ಮೇಲೆಯೇ ಸುರಿದುಕೊಳ್ಳಲು ಅವನ ಪಾದಗಳು ಕಪ್ಪಾದವು. ಮಿತ್ರಸಹ ಅಥವಾ ಸೌದಾಸ ಎಂಬ ನಾಮಾಂತರಗಳಿಂದ ಪ್ರಸಿದ್ಧನಾದ ಆ ರಾಜನು ಅಂದಿನಿಂದ ಕಲ್ಮಾಷಪಾದನಾಗಿ ಸಂಚರಿಸುತ್ತಿದ್ದನು ವಶಿಷ್ಠರಲ್ಲಿ ಬದ್ಧ ದ್ವೇಷವನ್ನು ಬೆಳೆಸಿಕೊಂಡಿದ್ದ ವಿಶ್ವಾಮಿತ್ರ ಮಹರ್ಷಿ ಕಲ್ಮಾಷಪಾದನಲ್ಲಿ ಕಿಂಕರನೆಂಬ ಮತ್ತೊಬ್ಬ ರಾಕ್ಷಸನನ್ನು ಆವೇಶಗೊಳಿಸಿ ವಶಿಷ್ಠರ ನೂರು ಮಕ್ಕಳನ್ನು ಕೊಲ್ಲಿಸಿದನು ಅಷ್ಟುಸಾಲದೆ ವಶಿಷ್ಠರ ಪ್ರಿಯ ಪುತ್ರನಾದ ಶಕ್ತಿಯನ್ನು ಕೊಂದು ಅವನ ಮಾಂಸರಕ್ತದ ಸವಿಕಂಡು ತೃಪ್ತನಾದನು ತನ್ನ ಮಕ್ಕಳೆಲ್ಲಾ ತನ್ನ ಮುಂದೆ ಹೋಗಿದ್ದನ್ನು ಕಂಡ ವಸಿಷ್ಠರು ದುಃಖದಿಂದ ಆಶ್ರಮ ಬಿಟ್ಟು ಎಲ್ಲಿಯಾದರೂ ಏಕಾಂತವಾಗಿ ತಪಸ್ಸನ್ನು ಮಾಡಲು ಯೋಚಿಸಿ ಹೊರಟರು ಗರ್ಭಿಣಿಯಾದ ವಶಿಷ್ಠರ ಸೊಸೆ ಇದನ್ನು ಗಮನಿಸಿ ತಾನೂ ಅವರ ಹಿಂದೆ ಹೊರಟಳು

ಮಾವನನ್ನು ಕುರಿತು ಎಲ್ಲಿಗೂ ಹೋಗಬೇಡವೆಂದೂ, ಸುಖದುಃಖಗಳನ್ನು ತಾವೂ ತಮ್ಮ ಅತ್ತೆ ಮಾವನವರೂ ಅನುಭವಿಸೋಣವೆಂದು ಎಷ್ಟು ಹೇಳಿದರೂ ಗಮನಿಸದ ಮುಂದೆ ಹೋಗುತ್ತಿದ್ದ ವಶಿಷ್ಠರಿಗೆ ಯಾರೋ ತಾತ, ತಾತ, ಅಪ್ಪಾ ಎಂಬುವುದಾಗಿ ಕೂಗಿ ಕರೆದಂತೆ ಕೇಳಿಸಲು ಹಿಂದೆ ನೋಡಲು ಸೊಸೆ ಅದೃಶ್ಯಂತಿ ಮತ್ತೆ ಮುಂದೆ ಹೋಗಲು ಅದೇ ಧ್ವನಿ ಅದೇ ಕೂಗು ನಿಂತುಕೇಳಲು ಯಾರೋ ವೇದವನ್ನು ಸ್ವರಪೂರಕವಾಗಿ ಪಠಿಸುವ ಧ್ವನಿ ಆ ಧ್ವನಿಯು ತಮ್ಮ ಸೊಸೆಯ ಗರ್ಭದಿಂದ ಏನು ಆಶ್ಚರ್ಯ ಅದೃಶ್ಯಂತಿ ಗರ್ಭವತಿಯಾಗಿರುವ ವಿಷಯವನ್ನು ತಿಳಿದ ಅವರು ಮೊಮ್ಮಗನನ್ನು ಕಾಣುವ ಆಸೆಯಲ್ಲಿ ಆಶ್ರಮವನ್ನು ತೊರೆದು ಹೋಗುವ ಗೋಜಿಗೆ ಹೋಗಲಿಲ್ಲ ನವಮಾಸ ತುಂಬಿದ ಮೇಲೆ ಶುಭಮುಹೂರ್ತದಲ್ಲಿ ಅದೃಶ್ಯಂತಿ ಗಂಡುಮಗುವಿಗೆ ಜನನ ವಿತ್ತಳು ಆ ಮಗುವಿಗೆ ಪರಾಶರನೆಂದು ನಾಮಕರಣ ಮಾಡಿದರು ಪರಾಸ್ತಾ+ಆಶಾ+ಯಸ್ಯಸಃ ಪರಾಶಃ ಪರಾಶಂ ರಾತಿ ಸ್ವಕಾರ್ಯ ತತ್ಪರಂ ಕರೋತಿ ಇತಿ ಪರಾಶರಃ, ತನ್ನ ಸಂತತಿ ನಾಶದಿಂದ ಜೀವಿತಾಶೆಯನ್ನು ತೊರೆದ (ಪರಾಶನಾಗಿದ್ದ) ವಶಿಷ್ಠರು ಮರಳಿ ಗೃಹಸ್ಥಾಶ್ರಮಕ್ಕೆ ಬಂದ ಕಾರಣ ಪರಾಶರನೆಂದು ಹೆಸರು ಆ ಮಗುವಿನ ಕಾರಣದಿಂದ ವಶಿಷ್ಠರು ಜೀವಿಸಲು ಆಸೆಹೊತ್ತರು ಮಹಾ ಭಾರತದ ಆದಿ ಪರ್ವದ ೧೯೪ ನೆ ಅಧ್ಯಾಯದಲ್ಲಿ ವೇದವ್ಯಾಸರು ಈ ವಿಷಯವನ್ನು ಕುರಿತು "ಪರಾಶ(ಸು) ಸ್ಯಯ ತಸ್ತೇನ ವಶಿಷ್ಠಃ ಸ್ಥಾಪಿತೋ ಮುನಿಃ ಗರ್ಭಸ್ಥೇನ ತತೋ ಲೋಕೇ ಪರಾಶರ ಇತಿ ಸ್ಮೃತಃ ಸಾವರ್ಣ್ಯಸ್ಯ ಮುನೇತಿ ಸರ್ಗೇ ಸಪ್ತರ್ಷಿಶ್ಚ ಭವಿಷ್ಯತಿ ವೇದಾನಾಂ ಚ ಸವ್ಯೆ ವಕ್ತಾ ಕುರುವಂಶಕರಸ್ತಥಾ ಇತಿಹಾಸಸ್ಯ ಕರ್ತಾ ಚ ಪುತ್ರಸ್ತೇ ಜಗತೋ ಹಿತಃ ಭವಿಷ್ಯತಿ ಮಹೇಂದ್ರಸ್ಯ ದಯಿತಃ ಸಮಹಾಮುನೇ ಅಜರಶ್ಚಾಮರಶ್ಚೈವ ಪರಾಶರ ಸುತಸ್ತವ" ಎಂಬುವ ಉಲ್ಲೇಖವಿದೆ

ಪರಾಶರರು ಹುಟ್ಟಿದ ಮೇಲೆ ವಶಿಷ್ಠರನ್ನೇ ಅಪ್ಪಾ ಎಂದು ಕರೆಯುತ್ತಿರಲು ತಾಯಿ ಅದೃಶ್ಯಂತಿ ಮಗನಿಗೆ ಎಲ್ಲವನ್ನು ವಿವರಿಸಿ ವಶಿಷ್ಠರು ಅಜ್ಜನೆಂತಲೂ ಅವರನ್ನು ಅಜ್ಜಾ ಎಂಬುವುದಾಗಿ ಕರೆಯಲು ಸೂಚಿಸಿ, ಶಕ್ತಿಯು ರಾಕ್ಷಸನಿಂದ ಹತನಾದ ವಿಷಯ ತಿಳಿಸಲು ಪರಾಶರರು ಕೋಪಗೊಂಡು ರಾಕ್ಷಸ ವಂಶವನ್ನು ನಿರ್ನಾಮಮಾಡಲು ಯಜ್ಞವನ್ನು ಆಚರಿಸಲು ಉದ್ಯುಕ್ತನಾದನು ವಸಿಷ್ಠರು ಎಷ್ಟು ಹೇಳಿದರೂ ಕೇಳದೆ ಯಜ್ಞವನ್ನು ಮಾಡಲು ಹವಿಸ್ಸನ್ನು ಹಾಕುವಾಗ ಯಾವ ದೈತ್ಯನ ಹೆಸರನ್ನು ಉಚ್ಚರಿಸಿದರೆ ಆ ದೈತ್ಯನೂ ಅವನ ಪರಿವಾರವೂ ಅಗ್ನಿ ಕೂಡದಲ್ಲಿ ಬಂದು ಬಿದ್ದು ಭಸ್ಮೀಭೂತರಾಗುತ್ತಿದ್ದನು ದೈತ್ಯರೆಲ್ಲರೂ ಇವನ್ನು ತಿಳಿದು ಸಪ್ತರ್ಷಿಗಳ ಮರೆಹೊಕ್ಕರು ದೈತ್ಯರ ಅಜ್ಜನಾದ ಪುಲಸ್ತ್ಯ ಋಷಿ ಎಲ್ಲಾ ಋಷಿಗಳೊಡನೆ ಪರಾಶರ ಯಜ್ಞ ಮಂಟಪಕ್ಕೆ ಬಂದು ಒಬ್ಬ ದೈತ್ಯನ ಅಕೃತ್ಯದಿಂದ ದೈತ್ಯ ಕುಲವನ್ನೇ ನಾಶಮಾಡುವ ಪ್ರವೃತ್ತಿ ಋಷಿಗಳ ಪರಂಪರೆಗೆ ಬಂದ ಸಂಪ್ರದಾಯವಲ್ಲ ಸಾಧುವಲ್ಲ ಎಂಬುದುದಾಗಿ ತಿಳಿಸಿದರು ವಶಿಷ್ಠರೂ ಕೂಡ ಮೊಮ್ಮಗನಿಗೆ ಮತ್ತೆ ಯಾಗವನ್ನು ನಿಲ್ಲುಸುವಂತೆ ಉಪದೇಶಮಾಡಿದರು ಅಂತೆಯೇ ಪರಾಶರರು ಯಾಗವನ್ನು ನಿಲ್ಲಿಸಿದನು ಋಷಿಗಳೆಲ್ಲಾ "ಪರಾಶರ, ನೀನು ಪ್ರಖ್ಯಾತ ಪುರಾಣ ಪ್ರವರ್ತಕನಾಗು ಸಕಲ ಇತಿಹಾಸ ನಿರ್ಮಾಪಕನಾಗು ಸ್ಮೃತಿ ಸಂಹಿತೆಗಳು ನಿನ್ನಿಂದ ವಿಖ್ಯಾತವಾಗಲಿ" ಎಂಬುವುದಾಗಿ ಆಶೀರ್ವಾದಮಾಡಿ ತಮ್ಮ ಆಶ್ರಮಗಳಿಗೆ ತೆರಳಿದರು ತೇಜಃಪುಂಜನಾದ ಪರಾಶರರು ಸರ್ವಶಾಸ್ತ್ರಗಳನ್ನು ಅಧ್ಯಯನ ಮಾಡಿ ಅಸಮಾನ್ಯ ಪಾಂಡಿತ್ಯವನ್ನು ಹೊಂದಿದರು ವೇದಾಂತ, ದರ್ಮ, ಸಂಹಿತೆ, ಸ್ಮೃತಿ, ಜ್ಯೋತಿಷ್ಯ ವೈದ್ಯ ನೀತಿ ಶಾಸ್ತ್ರಗಳನ್ನು ಕುರಿತು ತಮ್ಮ ಅಖಂಡ ತಪಸ್ಸಿನ ಶಕ್ತಿಯಿಂದ ಜ್ಞಾನಸಂಪತ್ತಿನಿಂದ ಉದ್ಗ್ರಂದಗಳನ್ನು ರಚಿಸಿ ಲೋಕಕ್ಕೆ ಉಪಕಾರ ಮಾಡಿದ ಮಹರ್ಷಿ

## ವೇದವ್ಯಾಸರ ಜನನ :

ಪ ರಾ ಶ ರ ರು ತೀರ್ಥಯಾತ್ರೆ ಕೈಗೊಂಡು ಯಮುನಾ ನದಿಯಲ್ಲಿ ಪ್ರಯಾಣ ಮಾಡುತ್ತಿದ್ದಾಗ,





# ಶ್ರೀ ಪದ್ಮಾವತೀ ಅಮ್ಮನವರ ದೇವಾಲಯ

## ತಿರುಚಾನೂರು

ಅಲಮೇಲು ಮಂಗಾಪುರವೆಂದು ಹೆಸರಾದ ಈ ಊರು ತಿರುಪತಿಯಿಂದ ನಾಲ್ಕು ಮೈಲು ದೂರದಲ್ಲಿದೆ ತಿರುಮಲೆಯ ದರ್ಶನವಾದ ಮೇಲೆ ಈ ಊರನ್ನು ದರ್ಶಿಸಿ ಪೂರ್ಣಕಾಮರಾಗುವುದು ಪರಂಪರೆ

### ಆಲಯ ಕಾರ್ಯಕ್ರಮ.

| | |
|---|---|
| ಸುಪ್ರಭಾತ | ಬೆಳಗ್ಗೆ 5--00 ಗಂಟೆಗೆ |
| ಸಹಸ್ರನಾಮಾರ್ಚನೆ | ಬೆಳಗ್ಗೆ 5--30 ಗಂಟೆಗೆ |

(ರೂ 6--00 ಶುಲ್ಕದಿಂದ ನಾಲ್ಕು ಮಂದಿಗೆ ಪ್ರವೇಶ)

| | |
|---|---|
| 1ನೇ ಗಂಟೆ | ಬೆಳಗ್ಗೆ 6--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 6--30 ಗಂಟೆಗೆ |
| ಶುದ್ಧಿ 2ನೇ ಗಂಟೆ | ಬೆಳಗ್ಗೆ 11--30 ಗಂಟೆಗೆ |
| ಸರ್ವದರ್ಶನ | ಮಧ್ಯಾಹ್ನ 12--00 ಗಂಟೆಗೆ |
| 3ನೇ ಗಂಟೆ | ಸಂಜೆ 6--00 ಗಂಟೆಗೆ |
| ಸರ್ವದರ್ಶನ | ಸಂಜೆ 6--30 ಗಂಟೆಗೆ |
| ಶುದ್ಧಿ | ರಾತ್ರಿ 8--45 ಗಂಟೆಗೆ |
| ಏಕಾಂತ | ರಾತ್ರಿ 9--00 ಗಂಟೆಗೆ |

### ಶುಕ್ರವಾರಗಳಲ್ಲಿ

| | |
|---|---|
| ಅಭಿಷೇಕ | ಬೆಳಗ್ಗೆ 9--00 ಗಂಟೆಗೆ |

(ರೂ 100/-- ಶುಲ್ಕದಿಂದ ಒಬ್ಬರಿಗೆ ಪ್ರವೇಶ)

(ಅಭಿಷೇಕಾನಂತರ ದರ್ಶನ ಒಬ್ಬರಿಗೆ ರೂ 5/--)

| | |
|---|---|
| ಎರಡನೇ ಗಂಟೆ | ಬೆಳಗ್ಗೆ 11--00 ಗಂಟೆಗೆ |
| ಸರ್ವದರ್ಶನ | ಬೆಳಗ್ಗೆ 11--30 ಗಂಟೆಗೆ |
| ಊಂಜಲ್‌ಸೇವೆ | ಸಂಜೆ 7--00 ಗಂಟೆಗೆ |

(ಮುಕುರ ಮಂಟಪದಲ್ಲಿ, ಶುಲ್ಕ ರೂ 150/--)

(5 ಗ್ರಾಂಗಳ ಬೆಳ್ಳಿಯ ಪದಕ ಬಹುಮಾನ ಉಂಟು) .

| | |
|---|---|
| 3ನೇ ಗಂಟೆ | ರಾತ್ರಿ 8--00 ಗಂಟೆಗೆ |
| ಸರ್ವದರ್ಶನ | ರಾತ್ರಿ 8--30 ಗಂಟೆಗೆ |
| ಶುದ್ಧಿ | ರಾತ್ರಿ 9--30 ಗಂಟೆಗೆ |
| ಏಕಾಂತಸೇವೆ | ರಾತ್ರಿ 9--45 ಗಂಟೆಗೆ |

**ಪೇಷ್ಕಾರ್.**

ಬೆಸ್ತರ ಸಾಕುಮಗಳಾದ ಮತ್ಸ್ಯಗಂದಿ (ಸತ್ಯವತಿ) ಯನ್ನು ಕಂಡು ಮೋಹಿತನಾಗಿ ಅವಳಲ್ಲಿ ಅನುರಕ್ತನಾಗಿ ಅವಳ ಸಂಗವನ್ನು ಬಯಸಿದನು

ಆಕೆಯ ಇಚ್ಛೆಯಂತೆ ಅವಳ ಕನ್ಯಾತ್ವಕ್ಕೆ ಭಂಗ ಬಾರದೆ ಆಕೆಯ ಶರೀರದ ದುರ್ಗಂದ ತೊಲಗಿ ದಿವ್ಯ ಪರಿಮಳ ಸೂಸುವಂತೆ ಕರುಣಿಸಿ ಆಕೆಯನ್ನು ಕೂಡಿದನು ಅವಳ ಗರ್ಬದಲ್ಲಿ ಕೃಷ್ಣ ದ್ವೈಪಾಯನ (ವ್ಯಾಸರು) ಹುಟ್ಟಿದರು ಈ ಪ್ರಸಂಗವನ್ನೇ ಶಿವಪುರಾಣದಲ್ಲಿ ಆಕೆಯು ತನ್ನ ಇಚ್ಛೆಯನ್ನು ಕುರಿತು "ಕನ್ಯಾಧರ್ಮೋ ನಮೇ ಹನ್ಯಾದ್ಯದಿ ಸ್ವೀಕುರುಮಾಂ ತದಾ ಪುತ್ರಶ್ಚ ತ್ವತ್ಸಮೋ ನಾಥ! ಭವೇದದ್ಭುತ ಶಕ್ತಿರ್ಮಾ ಸೌಗಂಧ್ಯಂ ಸರ್ವದಾಂಗೇ ಮೇ ತಾರುಣ್ಯಂ ಚ ನವಂನವಂ" ತನ್ನ ಕನ್ಯಾಧರ್ಮ ಲುಪ್ತವಾಗದಂತೆ ಮತ್ಸ್ಯಗಂದಿಯಾದ ತಾನು ದಿವ್ಯ ಪರಿಮಳಗಂದದಿಂದ ಕೂಡಿರುವಂತೆ, ಪರಾಶರ ಸಮನಾದ ಪುತ್ರನಾಗುವಂತೆ ತನ್ನ ತಾರುಣ್ಯ ಯಾವಾಗಲೂ ಚಿರ ನೂತನವಾಗಿರುವಂತೆ ವರವನ್ನು ಕೇಳಿ ಅದನ್ನೇ ಪರಾಶರರಿಂದ ಪಡೆದಳು ಮುಂದೆ ಆಕೆ ಶಂತನು ರಾಜನನ್ನು ಮದುವೆಯಾಗಿ ಚಿತ್ರಾಗಂದ ವಿಚಿತ್ರವೀರ್ಯರೆಂಬ ಮಕ್ಕಳನ್ನು ಪಡೆದು ಕುರುವಂಶದ ಏಳಿಗೆಗೆ ತನ್ನ ಜೀವನವನ್ನು ತೇದಳು

### ವಿಷ್ಣುಪುರಾಣ ಪ್ರಣೀತ :

ಪುರಾಣಗಳು ಅನೇಕ ವಿದ್ದರೂ ಪರಾಶರರು ರಚಿಸಿದ ವಿಷ್ಣುಪುರಾಣವು ಸನಾತನವು. ಧರ್ಮವನ್ನು ನಿರೂಪಿಸುವ ಹಾಗೂ ಪುರಾಣದ ಲಕ್ಷಣಗಳನ್ನೆಲ್ಲಾ ತಿಳಿಸುವ ಏಕೈಕ ಗ್ರಂಥ "ಸರ್ಗಶ್ಚ ಪ್ರತಿ ಸರ್ಗಶ್ಚ ವಂಶೋ ಮನ್ವಂತರಾಣಿ ಚ ವಂಶಾನು ಚರಿತಂ ಚೈವ ಪುರಾಣಂ ಪಂಚ ಲಕ್ಷಣಂ"

ವಿಷ್ಣು ಪುರಾಣವು ಪಂ ಚ ಲ ಕ್ಷ ಣ ಗ ಳ ನ್ನು ಹೊಂದಿವೆ ಯಾವ ಮತಕ್ಕೂ ಯಾವ ಪಂಗಡಕ್ಕೂ ಹೆಚ್ಚಿಗೆ ಪ್ರಾಶಸ್ತ್ಯ ಕೊಡದೆ ವೇದಗಳಿಗೆ ಅನುಗುಣವಾಗಿ ಧರ್ಮದ ತಿರುಳನ್ನು ತಿಳಿಸುವ ಲಲಿತವಾದ ರಮಣೀಯವಾದ ಆಖ್ಯಾನವಾಗಿದೆ ಪರಾಶರ ಮುನಿಗಳು ತಮ್ಮ ಶಿಷ್ಯರಾದ ಮೈತ್ರೇಯರನ್ನು ಕುರಿತು ಹೇಳಿದ ಮಹಾ ಪುರಾಣವಿದು ಮೈತ್ರೇಯರು ಪರಾಶರನ್ನು ಕುರಿತು "ಧರ್ಮಾಂಶ್ಚ ಬ್ರಾಹ್ಮಣಾದೀನಾಂ ತಥಾ ಚಾ ಶ್ರಮವಾಸಿನಾಮ್ ಶ್ರೋತುಮಿಚ್ಛಾಮ್ಯಹಂ ಸರ್ವಂ ತ್ವತ್ತೋ ವಾಸಿಷ್ಠನಂದನ" ಎಂಬುವುದಾಗಿ ಕೇಳಿದಾಗ ಹಿಂದೆ ತಾನು ರಾಕ್ಷಸರ ವಂಶವನ್ನು ನಾಶಮಾಡುವ ನೆಪದಲ್ಲಿ ಯಜ್ಞವನ್ನು ಆಚರಿಸುತ್ತಿದ್ದಾಗ ಪುಲಸ್ತ್ಯ ಮುನಿಗಳು ಬಂದು

ಅದನ್ನು ತಡೆದಾಗ ತಾನು ಹಿರಿಯರ ಮಾತಿನಂತೆ ಕ್ರೋದವನ್ನು ಬಿಟ್ಟಾಗ ಪುಲಸ್ತರು ಕೊಟ್ಟ ವರ ಜ್ಞಾಪಕ ಬಂತು

"ಪುರಾಣ ಸಂಹಿತಾ ಕರ್ತಾ
ಬವಾನ್ ವತ್ಸ ಭವಿಷ್ಯತಿ
ದೇವತಾ ಪಾರಮಾರ್ಥ್ಯಂ ಚ
ಯದಾವದ್ವೇತ್ಸತೇಭವಾನ್
ಪ್ರವೃತ್ತೇ ಚ ನಿವೃತ್ತೇಚ
ಕರ್ಮಣ್ಯಸ್ತಮಲಾ ಮತಿಃ
ಮತ್ರಸಾದಾ ದಸನ್ದಿಗ್ದಾ
ತವ ವತ್ಸ ಭವಿಷ್ಯತಿ"

"ನೀನು ಪುರಾಣ ಸಂಹಿತೆಯ ಕರ್ತನಾಗುವೆ ದೇವತೆಗಳ ಸ್ವರೂಪವು ನಿನಗೆ ತಿಳಿಯುತ್ತೆ ನನ್ನ ಅನುಗ್ರಹದಿಂದ ಪ್ರವೃತ್ತಿ ನಿವೃತ್ತಿ ಮಾರ್ಗಗಳಲ್ಲಿ ಕರ್ತವ್ಯ ಪರಿಣತೆಯನ್ನು ಪಡೆಯುವೆ" ಇತ್ಯಾದಿ ಈ ಜಗತ್ತು ವಿಷ್ಣುವಿನಿಂದ ಸೃಷ್ಟಿಸಲ್ಪಟ್ಟಿದೆ ಜಗತ್ತಿನ ಸ್ಥಿತಿ ಲಯಗಳಿಗೆ ಅವನೆ ಕಾರಣ" ಎಂಬುವುದಾಗಿ ವಿವರಿಸುವಾಗ--

"ವಿಷ್ಣೋಃ ಸಕಾಶಾದುದ್ಭೂತಂ
ಜಗತ್ತ್ರೈವ ಚ ಸ್ಥಿತಂ
ಸ್ಥಿತಿ ಸಂಯಮ ಕರ್ತಾ ಸೌ
ಜಗತೋಽಸ್ಯ ಜಗಚ್ಚ ಸಃ"

ಎಂಬುವುದಾಗಿ ತಿಳಿಸಿದ್ದಾರೆ ವಿಷ್ಣುವು ಅವಿಕಾರನು ಶುದ್ಧನು ಅವಿನಾಶಿ ಹರಿಯೂ ಶಂಕರನೂ ಭಕ್ತರ ಅಭಿಮಾನಿಯೂ ಆದ ವಾಸುದೇವನಿಗೆ ನಮಸ್ಕಾರ ಏಕನಾಗಿದ್ದರೂ ಅವನು ಅನೇಕರೂಪಿ ವಿಶ್ವಕ್ಕೆ ಆದಾರನು ಅವನು ಪರಿಶುದ್ಧನು ಜ್ಞಾನಸ್ವರೂಪನು ಎಂಬುವುದಾಗಿ ವಿಷ್ಣುಪುರಾಣದ ಎರಡನೆಯ ಅಧ್ಯಾಯದ ಈ ಶ್ಲೋಕಗಳು ಭಕ್ತಿಶ್ಲೋಕಗಳ ಮಹಾಪೂರ--

"ಅವಿಕಾರಾಯ ಶುದ್ಧಾಯ
ನಿತ್ಯಾಯ ಪರಮಾತ್ಮನೇ
ಸದೈಕ ರೂಪರೂಪಾಯ
ವಿಷ್ಣವೇ ಸರ್ವ ಜಿಷ್ಣವೇ
ನಮೋ ಹಿರಣ್ಯಗರ್ಭಾಯ
ಹರಯೇ ಶಂಕರಾಯ ಚ
ವಾಸುದೇವಾಯ ತಾರಾಯ
ಸರ್ಗಸ್ಥಿತ್ಯಂತಕಾರಿಣೇ
ಏಕಾನೇಕ ಸ್ವರೂಪಾಯ
ಸ್ಥೂಲ ಸೂಕ್ಷ್ಮಾತ್ಮನೇ ನಮಃ
ಅವ್ಯಕ್ತ ವ್ಯಕ್ತರೂಪಾಯ
ವಿಷ್ಣವೇ ಮುಕ್ತಿ ಹೇತವೇ"

ಹರಿಗೂ ಹರನಿಗೂ ಬೇದವಿಲ್ಲ ತಿಳಿಯದವರು ಹಾಗೆ ಬಾವಿಸುತ್ತಾರೆ ಅಂತಹ ಬೇದವನ್ನು ಕಲ್ಪಿಸುವವರು ಪಾಪವನ್ನು ಪೊಂದುತ್ತಾರೆ ಎಂಬುವುದಾಗಿ ಹೇಳುವಾಗ "ಅವಿದ್ಯಾ ಮೋಹಿತಾತ್ಮಾನಃ ಪುರುಷಾ ಬಿನ್ನ ದರ್ಶಿನಃ ವದಂತಿ ಭೇದಂ ಪಶ್ಯಂತಿ ಚಾವ ಯೋರಂತರಂ ಹರ" ತಿಳಿಸಿದ್ದಾನೆ

ವಿಷ್ಣು ಪುರಾಣದ ಮೊದಲನೆಯ ಅಧ್ಯಾಯದಲ್ಲಿ ಪ್ರಹ್ಲಾದನು ನಿನ್ನ ಬಗ್ಗೆ ನಿಶ್ಚಲವಾದ ಭಕ್ತಿಯು ನನ್ನಲ್ಲಿ ನೆಲಸಲಿ ಎಂಬುವುದಾಗಿ ದೇವರನ್ನು ಕೋರುವಾಗ--

"ನಾದ ಯೋನಿ ಸಹಸ್ರೇಷು
ಯೇಷು ಯೇಷು ವ್ರಜಾಮ್ಯಹಂ
ತೇಷು ತೇಷು ಅಚ್ಯುತಾಬಃ
ಅಚ್ಯುತಾಸ್ತು ಸದಾ ತ್ವಯಿ
ಯಾ ಪ್ರೀತಿ ರವಿವೇಕಾನಾಂ
ವಿಷಯೇ ಷ್ವನಪಾಯಿನೀ
ತ್ವಾಮನುಸ್ಮರತಃ ಸಾಮೇ
ಹೃದಯಾನ್ಮಾಪ ಸರ್ಪತು"

ಪ್ರಭುವೇ ನಾನು ಯಾವ ಯೋನಿಗಳಲ್ಲಿ ಜನಿಸಲಿ ನನಗೆ ನಿನ್ನಲ್ಲಿ ಅಚ್ಯುತವಾದ ಭಕ್ತಿ ನೆಲೆಸಿರಲಿ ವಿವೇಕ ಹೀನರಾದ ಜನರಿಗ ವಿಷಯ ಸುಖಗಳಲ್ಲಿ ಯಾವರೀತಿ ಅಚಲವಾದ ಪ್ರೀತಿ ಉಂಟಾಗುತ್ತೋ ಅಂತಹ ನಿಶ್ಚಲವಾದ ಪ್ರೀತಿ ಸದಾ ನಿನ್ನನ್ನು ಧ್ಯಾನಿಸುತ್ತಿರುವ ನನ್ನ ಹೃದಯದಲ್ಲಿ ಸದಾ ನೆಲಸಿರಲಿ" ಎಂಬುವುದಾಗಿ ಹೇಳುವ ಈ ಶ್ಲೋಕ ಭಕ್ತಿ ಪಂದಕ್ಕೆ ನೀಡಿದ ಅಮೂಲ್ಯ ಶ್ಲೋಕ ರತ್ನ ಇಷ್ಟು ಸುಂದರವಾಗಿ ಅವ್ಯಬಿಚಾರಿಣೀ ಭಕ್ತಿಯ ಬಗ್ಗ ಇನ್ನು ಯಾವ ಮಹರ್ಷಿ ಉದಹರಿಸಿಲ್ಲ ಬಗವದ್ ಬಕ್ತಿಯ ಶ್ರೇಷ್ಠತೆಯನ್ನು ಪ್ರತಿಪಾದಿಸುವ ಮನೋಹರ ಶ್ಲೋಕ ವಿಷ್ಣು ಪುರಾಣದಲ್ಲಿ ಚರತನ ಚರಿತ್ರೆ ಮನ್ವಂತರಗಳ ವಿವರಣೆ ವ್ಯಾಸರ ವೃತ್ತಾಂತ, ವೇದಗಳ ವಿಭಾಗ ಆಶ್ರಮಗಳ ವರ್ಣನೆ, ಶ್ರಾದ್ದ ಪ್ರಶಂಸೆ ಶ್ರೀಕೃಷ್ಣ ಚರಿತ ಕಲಿಯುಗದ ಮಹಿಮೆ ಬಗವಂತನ ಪರಮಾರ್ದಸ್ವರೂಪ ಮೋಕ್ಷವಿವರಣೆ, ಪ್ರಳಯ ಇತ್ಯಾದಿ ಇದರಲ್ಲಿ ಉಕ್ತವಾಗಿದೆ

ಆರ್ಯರು ಪರಾಶರ ಸ್ಮೃತಿಯನ್ನು ಧರ್ಮ ಸಂಹಿತಾ ಎಂಬುವುದಾಗಿ ಕರೆಯುತ್ತಾರೆ ವೇದಗಳ ಅರ್ದವನ್ನು ತಿಳಿಸುವುದು ಸ್ಮೃತಿ ಎಂಬುವುದಾಗಿ

## ಗಮನಿಕೆ

ವಿವಿಧ ಭಾಷೆಗಳಲ್ಲಿ ಸಪ್ತಗಿರಿಯ ಪ್ರಚಾರ, ಆಸ್ತಿಕರ ಅಭಿಮಾನಗಳು ದಿನ ದಿನ ಪ್ರವರ್ಧಮಾನವಾಗುತ್ತಿರುವುದರಿಂದ ಕೆಲವರು ಚಂದಾದಾರರಿಗೆ ಸಪ್ತಗಿರಿ ಪ್ರತಿಗಳು ಲಭಿಸದೆ ಹೋಗುತ್ತಿವೆ ಆದ್ದರಿಂದ ಸಪ್ತಗಿರಿಯನ್ನು ಕೋರುವವರು ಕೆಳಗಿನ ಸೂಚನೆಗಳನ್ನು ಗಮನಿಸಲು ಕೋರುತ್ತೇವೆ

* ಸಪ್ತಗಿರಿಯನ್ನು ಕೋರುವವರು ಪ್ರತಿತಿಂಗಳಿನಲ್ಲಿ ೧೫ನೇ ತಾರೀಖಿನ ಒಳಗೆ ಚಂದಾ ಹಣವನ್ನು ಕಳುಹಿಸಬೇಕು ನಂತರ ಕಳುಹಿಸಿದವರಿಗೆ ಮಾರನೆಯ ತಿಂಗಳಿನಿಂದ ಮಾತ್ರವೇ ಪತ್ರಿಕೆ ಲಭ್ಯವಾಗುತ್ತದೆ

* ಹೊಸ ಚಂದಾದಾರರು ಮನಿ ಆರ್ಡರ್ ಕೂಪನಿನಲ್ಲಿ 'ಹೊಸ ಚಂದಾ' ಎಂದು ಬರೆಯಬೇಕು ಮಿಕ್ಕ ಚಂದಾದಾರರು ಕೂಪನಿನಲ್ಲಿ ತಮ್ಮ ಚಂದಾಸಂಖ್ಯೆಯನ್ನು ನಮೂದಿಸಬೇಕು ಹಿಂದಿನ ಸಂಚಿಕೆಯ ತಮ್ಮ ವಿಳಾಸದ ಕಾಗದವನ್ನು ಕಳುಹಿಸಿದರೂ ಬಹಳ ಸೌಕರ್ಯವಾಗುತ್ತದೆ

* ಸಪ್ತಗಿರಿ ಪ್ರತಿಗಳಿಗೆ ಸಂಬಂಧಿಸಿದ ಹಣವನ್ನಾಗಲಿ, ಇತರ ವಿವರಗಳಿಗಾಗಲಿ ಕೆಳಗಿನ ವಿಳಾಸಕ್ಕೆ ಮಾತ್ರವೇ ಬರೆಯಬೇಕು

**ಸಂಪಾದಕರು**
ಸಪ್ತಗಿರಿ
ಟಿ ಟಿ ಡಿ
ತಿರುಪತಿ-೫೧೭೫೦೧

ಹೇಳುವಾಗ "ಸ್ಮರ್ಯತೇ ವೇದಾರ್ಧ ಅನಯಾ" ಎಂಬುವುದಾಗಿ ತಿಳಿಸುತ್ತಾರ ಕಲೌ ಪರಾಶರಾಃ ಸ್ಮೃತಾಃ ಎಂಬುವ ಉಕ್ತಿಯಂತೆ ಕಲಿಯುಗದಲ್ಲಿ ಪರಾಶರ ಸ್ಮೃತಿ ಧರ್ಮವನ್ನು ಬೋಧಿಸುವುದರಲ್ಲಿ ಶ್ರೇಷ್ಠ ಎಂಬುವುದಾಗಿ ತಿಳಿಸಿದ್ದಾರೆ ಪರಾಶರ ಸ್ಮೃತಿ ಮೊದಲನೆಯ ಶ್ಲೋಕ--

"ಅದಾತೋ ಹಿಮ ಶೈಲಾಗ್ರೇ
ದೇವ ದಾರು ವನಾಲಯೇ
ವ್ಯಾಸ ಮೇಕಾಗ್ರ ಮಾಸೀನಂ
ಅಪೃಚ್ಛನ್ ಋಷಯಃ ಪುರಾ

ಹಿಮಾಲಯದಲ್ಲಿ ಪ್ರಸನ್ನ ಚಿತ್ತರಾದ ವ್ಯಾಸರನ್ನು ಕುರಿತು ಧರ್ಮವನ್ನು ತಿಳಿಯ ಬಯಸಿದರು, ಆಗ ವ್ಯಾಸರು--

"ನ ಚಾಹಂ ಸರ್ವತತ್ವಜ್ಞಃ
ಕದಂ ಧರ್ಮಂ ವದಾಮ್ಯಹಂ
ಅಸ್ಮತ್ ಪಿತೈವ ಪ್ರಷ್ಟವ್ಯ
ಇತಿ ವ್ಯಾಸ ಸುತೋಽವದತ್

ನನಗೆ ಎಲ್ಲಾ ದರ್ಮವು ತಿಳಿಯದು ನನ್ನ ತಂದ ಅದನ್ನು ಬಲ್ಲ ಎಂಬುವುದಾಗಿ ತಿಳಿಸಿದಾಗ ಋಷಿಗಳು ವ್ಯಾಸರೊಡನೆ ಬದರಿಕಾಶ್ರಮಕ್ಕೆ ಹೋಗಿ ಮಾನವ ದರ್ಮವನ್ನು ಶ್ರುತಪಡಿಸು ಎಂಬುವುದಾಗಿ ದೇಡಿಕೊಂಡಾಗ ಆಚಾರಕಾಂಡ, ಪ್ರಾಯಶ್ಚಿತ್ತಕಾಂಡಗಳನ್ನು ಕಲಿಯುಗದ ಮಾನವರ ಹಿತಕ್ಕಾಗಿ ಬೋದಿಸಿದನು 578 ಶ್ಲೋಕಗಳ ಮಾನವ ಧರ್ಮ ಗ್ರಂದ ಅತಿದಿ ಸತ್ಕಾರ ವಿಷಯ ತಿಳಿಸುವಾಗ ಪರಾಶರರು ದೂರದೇಶದಿದ ಮದ್ಯಾಹ್ನ ಕಾಲಕ್ಕೆ ಮನೆಗೆ ಬಂದವನೇ ಸರಿಯಾದ ಅತಿದಿ ಅಂತಹ ಅತಿಥಿಗೆ ಸ್ವಾಗತ ನೀಡಿ ಶ್ರದ್ಧೆಯಿಂದ ಆಹಾರ ಪಾನೀಯಗಳನ್ನು ನೀಡಿ ಸತ್ಕರಿಸಬೇಕು ಅಂತಹ ಅತಿದಿಗೆ ತಾತ್ಸಾರ ಮಾಡಿದರೆ ಮಹಾಪಾಪ ಎಂತಹ ಹೋಮಮಾಡಿದರೂ ನಿರರ್ಥಕ

"ಅತಿಥಿರ್ ಯಸ್ಯಬಗ್ನಾಶಃ
ತಸ್ಯ ಹೋಮೋ ನಿರರ್ದಕಃ"

ಅಂತಹ ಅತಿಥಿಯ ಪೂರ್ವಾಪರಗಳನ್ನು ಪ್ರಶ್ನಿಸಿಬಾರದು ಆತನ ಬಗ್ಗೆ ತುಂಬ ಗೌರವ ತೋರಿಸಬೇಕು ಮಾನವೀಯತೆ ದೃಷ್ಟಿಯಿಂದ ಮಾತ್ರ--

"ನ ಪೃಚ್ಛೇತ್ ಗೋತ್ರ ಚರಣೇ
ನಸ್ವಾದ್ಯಾಯಂ, ತಥೈವ ಚ
ಹೃದಯೇ ಕಲ್ಪಯೇ ದ್ದೇವಂ
ಸರ್ವದೇವ ಮಯೋಹಿ ಸಃ"

ವರ್ಣಾಶ್ರಮ ದರ್ಮಗಳನ್ನು ವಿವರಿಸುವಾಗ ಪರಾಶರರು ಬ್ರಾಹ್ಮಣನು ಕೃಷಿಗಿಂತ ಹಸುಗಳನ್ನು ಸಾಕಿ ಸಲುಹುವ ಹವ್ಯಾಸವೇ ಉತ್ತಮ ಎಂಬುವುದಾಗಿ ಪಶುಗಳಲ್ಲಿ ಪ್ರೀತಿ ಬೆಳಸುವ ಪ್ರವೃತ್ತಿ ಧರ್ಮವನ್ನು ಉಪದೇಶಿಸಿದ್ದಾನೆ ಶೌಚ ವಿಷಯ ಹೇಳುವಾಗ ಬ್ರಾಹ್ಮಣನು ದಿನ ತ್ರಯೇಣ ಅಶೌಚವಿದೆಯಂತಲೂ, ಕ್ಷತ್ರಿಯನಿಗೆ ಹನ್ನೆರಡು, ವೈಶ್ಯನಿಗೆ ಹದಿನೈದು, ಶೂದ್ರನಿಗೆ ಒಂದು ತಿಂಗಳು ಅಶೌಚವನ್ನು ತಿಳಿಸಿದ್ದಾನೆ ಅಗ್ನಿಕಾರ್ಯ ಮಾಡುವ ಬ್ರಹ್ಮಚಾರಿಗೆ ಅಶೌಚವಿಲ್ಲ ದೇಶಕ್ಕಾಗಿ ಯುದ್ಧಮಾಡಿದರೆ--

"ಸ್ವರ್ಗ ಜಿತೇನ ಲಭ್ಯತೇ ಲಕ್ಷ್ಮೀ
ಮೃತೇವಾಪಿ ಸುರಾಂಗನಾ"

ಆತ್ಮಹತ್ಯೆ ಮಹಾಪಾಪ ಎಂಬುವುದನ್ನು ಹೇಳುವಾಗ ಪರಾಶರರು ಆತ್ಮಹತ್ಯೆ ಮಾಡಿಕೊಂಡ ಮನುಷ್ಯ 60,000/- ವರ್ಷಗಳು ನರಕದಲ್ಲಿ ಕೀವುರಕ್ತಗಳಲ್ಲಿ ನರಳಬೇಕಾಗುವುದು ಎಂಬುವುದಾಗಿ ತಿಳಿಸುತ್ತಾನ ಪರಾಶರರಲ್ಲಿ ಸಾಮಾಜಿಕ ಪ್ರಜ್ಞೆ ಕನ್ನೆಯನ್ನು ಕ್ಲುಪ್ತ ಕಾಲದಲ್ಲಿ ಮದುವೆ ಮಾಡದಿದ್ದರ ಮಹಾ ಅಪರಾದ ಎಂಬುವುದನ್ನು ತಿಳಿಸುವಾಗ--

"ಮಾತಾ ಚೈವ ಪಿತಾ ಚೈವ
ಜ್ಯೇಷ್ಠೋ ಭ್ರಾತಾ ತಥ್ಯವ ಚ
ತ್ರಯಸ್ತೇ ನರಕಂ ಯಾಂತಿ
ದೃಷ್ಟ್ವಾ ಕನ್ಯಾಂ ರಜಸ್ವಲಾಂ"

ಎಂಬುವುದಾಗಿ ದರ್ಮ ಬೋದನೆ ಮಾಡಿದ್ದಾರೆ

ಶುದ್ದಿಗೊಳಿಸುವ ಪದಾರ್ದಗಳು ಬೆಳ್ಳಿ, ಬಂಗಾರ, ಮಣಿಪಾತ್ರೆ, ಶಂಖ, ನೀರಿನಲ್ಲಿ ತೊಳೆದು ಶುದ್ದಿ

ಮಾಡಬಹುದು ಹತ್ತಿ, ಉಣ್ಣೆ, ಬೆತ್ತದ ಆಸನ ತಲೆ ದಿಂಬು, ಜಲ ಪ್ರೋಕ್ಷಣೆಯಿಂದ ಶುದ್ಧಿ ಬೆಕ್ಕು ನೊಣ, ಕ್ರಿಮಿ ಕೀಟಗಳು ಮುಟ್ಟಿದ ಆಹಾರ ಉಚ್ಚಿಷ್ಟವಲ್ಲ ಅಗ್ನಿ, ಜಲ, ವೇದ, ಸೂರ್ಯ, ಅನಿಲ ಮುಂತಾದವರ ಸಾನ್ನಿಧ್ಯವು ಶ್ರೋತ್ರಿಯರ ಬಲಗಿಲಿಯಲ್ಲಿ ಇದೆ ಎಂಬುವುದು ಪರಾಶರರ ಮತ ಆಪತ್ಕಾಲದಲ್ಲಿ, ದಾರುಣಸ್ಥಿತಿಯಲ್ಲಿರುವಾಗ ಧರ್ಮವನ್ನು ಆಚರಿಸಲು ಕಷ್ಟವಾದರೆ ದೋಷವಿಲ್ಲ ದೇಶದಲ್ಲಿ ಗಲಭೆ, ಪ್ರಯಾಣದಲ್ಲಿ, ರೋಗ ಬಂದಾಗ ಮೊದಲು ತನ್ನ ದೇಹ ರಕ್ಷಣೆ ತರುವಾಯ ಧರ್ಮವನ್ನು ಸರಿಯಾಗಿ ಆಚರಿಸಬಹುದು ಎಂಬುವುದಾಗಿ ಪರಾಶರರು ಹೇಳುವಾಗ --

"ದೇಶಬಂಗೇ ಪ್ರವಾಸೇ ವಾ
ವ್ಯಾಧಿಷು ವ್ಯಸನೇಷ್ವಪಿ
ರಕ್ಷೇದೇವ ಸ್ವದೇಹಾದಿ
ಪಶ್ಚಾದ್ಧರ್ಮಂ ಸಮಾ ಚರೇತ್"

ಎಂಬುವುದಾಗಿ ಅಪ್ಪಣೆ ಕೊಟ್ಟಿದ್ದಾರೆ ಒಂಬತ್ತನೆಯ ಅಧ್ಯಾಯದಲ್ಲಿ ಗೋವಿನ ರಕ್ಷಣೆ ಅದನ್ನು ಕೊಂದರೆ ಬರುವ ಪಾಪ ನರಕಗಳ ವಿವರಣೆ ಪ್ರಾಯಶ್ಚಿತ್ತಗಳು, ಗೋವಿಗೆ ಗಾಯವಾದರೆ ಅದು ಚೇತರಿಸಿಕೊಳ್ಳುವವರೆಗೆ ಶುಶ್ರೂಷೆ ಮಾಡದೇ ಕಾದ್ದು ಮನುಷ್ಯರ ಕರ್ತವ್ಯ ಎಂಬುವುದಾಗಿ ಉಪದೇಶಮಾಡಿದ್ದಾರೆ ಹತ್ತನೆಯ ಅಧ್ಯಾಯದಲ್ಲಿ ಚಾತುರ್ವರ್ಣರಿಗೆ ಆಯಾ ಅಪರಾಧಗಳಿಗೆ ತಕ್ಕ ಪರಿಹಾರ ಪ್ರಾಯಶ್ಚಿತ್ತಗಳನ್ನು ಬೋಧಿಸಲಾಗಿದೆ ಸ್ತ್ರೀಯರಿಗ ಕಡಿಮೆ ಪ್ರಮಾಣದ ಪ್ರಾಯಶ್ಚಿತ್ತಗಳನ್ನು ತಿಳಿಸುತ್ತಾನೆ ನಾರೀತಸ್ಮಾತ್ತಾಂ ನತು ದೂಷಯೇತ್ -- ಎಂಬುವುದಾಗಿ ಸ್ತ್ರೀಯರನ್ನು ದೂಷಿಸಬಾರದು ಎಂಬುವುದಾಗಿ ಪರಾಶರರು ಸ್ತ್ರೀಯರಲ್ಲಿ ಗೌರವ ತೋರಿದ್ದಾರೆ ಬಲಾತ್ಕಾರದಿಂದ ತಿಳಿಯದೆ ಭೋಗಿಸಲ್ಪಟ್ಟ ನಾರಿಗೆ ಕೇವಲ ಪ್ರಾಜಾಪತ್ಯ ಹಾಗೂ ಋತುಸ್ರಾವದಿಂದ ಶುದ್ಧಿಯಾಗುತ್ತಾಳೆ ಎಂಬುವ ಉದಾರ ಧೋರಣೆ ಪರಾಶರ ಋಷಿಗಳ ಅಭಿಪ್ರಾಯ ಉಪವಾಸ ವ್ರತಗಳು ಶೂದ್ರರಿಗೆ ಸ್ನಾನ ಸಂಧ್ಯಾ ಅರ್ಚನೆಗಳು ವೈಶ್ಯನಿಗ ಜಪ ಹೋಮಾದಿಗಳು ಕ್ಷತ್ರಿಯನಿಗೆ ಪಾಪ ಪರಿಹಾರವಾಗಿ ಶುದ್ಧರಾಗುತ್ತಾರೆ ಎಂಬುವುದು ಪರಾಶರರ ಮತ

ಪಂಚಗವ್ಯ ಪ್ರಕರಣ ಅದರಿಂದ ಶುದ್ಧೀಕರಣ ಮಹಿಮೆ ಇತ್ಯಾದಿ ೧೧ ನೆಯ ಅಧ್ಯಾಯದಲ್ಲಿ ವಿವರಿಸಲಾಗಿದೆ ಪುಣ್ಯಸ್ನಾನ, ಪಿತೃತರ್ಪಣ, ಆಚಮನ, ಅನ್ನದೋಷ, ಗೃಹಸ್ಥನ ಕರ್ತವ್ಯಗಳನ್ನು ೧೨ ನೆಯ ಅಧ್ಯಾಯದಲ್ಲಿ ವಿವರಿಸುತ್ತಾ--

"ನ್ಯಾಯೋಪಾರ್ಜಿತ ವಿತ್ತೇನ
ಕರ್ತವ್ಯಂ ಹ್ಯಾತ್ಮರಕ್ಷಣಂ
ಅನ್ಯಾಯೇನ ತು ಯೋ ಜೀವೇತ್
ಸರ್ವ ಕರ್ಮ ಬಹಿಷ್ಕೃತಃ"

ನ್ಯಾಯಮಾರ್ಗದಿಂದ ಹಣವನ್ನು ಗಳಿಸಿ ಆತ್ಮಪೋಷಣೆ ಮಾಡಿಕೊಳ್ಳುವುದು ಶ್ರೇಷ್ಠ. ಅನ್ಯಾಯವಾಗಿ ಹಣವನ್ನು ಗಳಿಸುವ ವ್ಯಕ್ತಿ ಸಮಾಜಘಾತುಕನು ಎಂಬುವುದಾಗಿ ಪರಾಶರರು ಬೋಧಿಸಿದ್ದಾನೆ ಕೊನೆಯ ಶ್ಲೋಕದಲ್ಲಿ "ಯದಾಧ್ಯಯನ ಕರ್ಮಾಣ ಧರ್ಮ ಶಾಸ್ತ್ರಮಿದಂ ತದಾ ಅಧ್ಯೇ ತವ್ಯಂ ಪ್ರಯತ್ನೇನ ನಿಯತಂ ಸ್ವರ್ಗಕಾಮಿನಾ" (ಈ ಸ್ಮೃತಿಯು ವೇದಕ್ಕೆ ಸಮಾನ ಪ್ರಯತ್ನದಿಂದ ಎಲ್ಲರೂ ಬರದೇಕು ಸ್ವರ್ಗಪ್ರಾಪ್ತಿಯಾಗುವುದರಲ್ಲಿ ಸಂಶಯ ವಿಲ್ಲ)

## *ಪರಾಶರ ಗೀತ*

ತತ್ವದರ್ಶಿಗಳಿಗ, ಸಾದಕರಿಗೆ ಪಾಮರರಿಗೆ ಮಾರ್ಗದರ್ಶಿಯಾದ ಭಗವದ್ಗೀತೆಯಂತೆ ಪರಾಶರಗೀತ ಸಾಂಖ್ಯ, ವೇದ, ವೇದಾಂತ ಉಪನಿಷತ್ತುಗಳ ಸಾರವನ್ನು ಒಳಗೊಂಡಿದೆ ಮಹಾಬಾರತದ ಶಾಂತಿ ಪರ್ವದ ಮೋಕ್ಷದರ್ಮ ಪರ್ವದಲ್ಲಿ ಪರಾಶರಗೀತೆಯ ಪರಾಕಾಷ್ಠತೆಯನ್ನು ನಾವು ಕಾಣಬಹುದು ಇದು ದರ್ಮಜಿಜ್ಞಾಸನಾದ ಜನಕಮಹಾರಾಜನಿಗೂ ಪರಾಶರ ಋಷಿಗಳಿಗೂ ನಡೆದ ಸಂವಾದರೂಪಕದಲ್ಲಿವೆ ರಾಜಋಷಿ ಜನಕ ಮಹಾರಾಜನು ಪರಾಶರನ್ನು ಕುರಿತು ಮಾನವನು ಯಾವ ಶುಭಕಾರ್ಯವನ್ನು ಆಚರಿಸಿದರ ಇಹಪರಗಳಲ್ಲಿ ಶ್ರೇಯಸ್ಸನ್ನು ಹೊಂದುವನು ಎಂಬುವುದಾಗಿ ಕೇಳಿದಾಗ ಪರಾಶರರ ಉತ್ತರ--

"ದರ್ಮ ಏವ ಕೃತಃ ಶ್ರೇಯಾನ್
ಇಹ ಲೋಕೇ ಪರತ್ರ ಚ
ತಸ್ಮಾದ್ಧಿ ಪರಮಂ ನಾಸ್ತಿ
ಯದಾ ಪ್ರಾಹುಃ ಮನೀಷಿಣಃ

ದರ್ಮವನ್ನೇ ಅಂದರ ವೇದೋಕ್ತವಾದ ಕರ್ಮವಿದಿಗಳನ್ನು ವಿಧಿ ಪೂರ್ವಕವಾಗಿ ಆಚರಿಸಿದರೆ ಇಹ ಪರಗಳೆರಡರಲ್ಲಿಯೂ ಶ್ರೇಯಸ್ಸನ್ನು ಪುರುಷನು ಹೊಂದುವನು ಪಲವು ಕರ್ಮಗಳನ್ನು ಮಾಡಿ ಅದಕ್ಕೆ ತಕ್ಕಂತೆ ಗತಿಯನ್ನು ಹೊಂದುತ್ತಾನೆ ಮತ್ತೆ --

"ನ ಬೀಜಾ ಜ್ಜಾಯತೇ ಕಿಂಚಿತ್
ನ ಕೃತ್ವಾ ಸುಖಮೇದತೆ
ಸುಕೃತ್ಯೈಃ ವಿಂದ್ಯತೇ ಸೌಖ್ಯಂ
ಪ್ರಾಪ್ಯ ದೇಹಕ್ಷಯಂ ನರಾಃ"

ಬೀಜ ಹಾಕದೆ ಮೊಳಕೆ ಬರದ ಹಾಗೆ ಪುಣ್ಯಕರ್ಮಗಳನ್ನು ಮಾಡದೆ ಮನುಷ್ಯ ಸುಖವನ್ನು ಹೊಂದುವುದಿಲ್ಲ ಪರಾಶರರು ಪೂರ್ವಜನ್ಮದ ಫಲದ ಕರ್ಮವನ್ನು ಅನುಬವಿಸುವಾಗ ನಾಲ್ಕು ವಿದವಾದ ಚಕ್ಷುಸಾ ಮನಸಾ ವಾಚಾ ಕರ್ಮಣಾ ಚ ಮೂಲಕವಾಗಿ ಮಾಡಿದ ಕರ್ಮಗಳ ಫಲ ಕಾರಣವೆನ್ನುತ್ತಾರೆ ಪಾಪಫಲವಾಗಲಿ, ಪುಣ್ಯಫಲವಾಗಲಿ ಅದನ್ನು ಅನುಭವಿಸದ ಹೊರತು ತಪ್ಪಿದ್ದಲ್ಲ ಎಂದು ಅವರ ಅಭಿಪ್ರಾಯ ಸುಖವನ್ನು ನೀಡುವ ಕಾರ್ಯಗಳ ಪಟ್ಟಿಯಲ್ಲಿ ಪರಾಶರರು--

"ದಮಃ ಕ್ಷಮಾ ಧೃತಿಸ್ತೇಜಃ
ಸಂತೋಷಃ ಸತ್ಯವಾದಿತಾ
ಹ್ರೀಃ ಅಹಿಂಸಾ ವ್ಯಸನಿತಾ
ದಾಕ್ಷ್ಯಂ ಚೇತಿ ಸುಖಾವಹಾಃ"

ಎಂಬುವುದಾಗಿ ಹೇಳಿದ್ದಾರೆ ಇಲ್ಲಿ ಇಂದ್ರಿಯ ನಿಗ್ರಹ, ಕ್ಷಮೆ, ದರ್ಮ, ತೇಜಸ್ಸು, ಸಂತೋಷ, ಸತ್ಯ ವಾಕ್ಕು ಲಜ್ಜೆ, ಅಹಿಂಸೆ ಕೆಟ್ಟ ವ್ಯಸನಗಳು ಇಲ್ಲದಿರುವುದು ದಕ್ಷತೆ -- ಇವುಗಳನ್ನು ಆಚರಿಸಿದರೆ ಮಾನವನು ಶ್ರೇಯಸ್ಸನ್ನು ಹೊಂದುವನು ವೈರಾಗ್ಯವನ್ನು ಹೊಂದಿದ ಪುರುಷ ಪರಮ ಸುಖಿ ಸತ್ಯೇನ ಶೀಲೇನ ಸುಖಂ ನರೇಂದ್ರ -- ಕರೋತಿ ಯಃ ಶುಬಂ ಕರ್ಮ ಸರ್ವೆ ಭದ್ರಾಣಿ ಪಶ್ಯತಿ -- ಶುಬಕರ್ಮವನ್ನು ಮಾಡುವವ ಶುಭೋದಯವನ್ನು ಹೊಂದುವ, ನ್ಯಾಯವಾದ ರೀತಿಯಲ್ಲಿ ದನ ಸಂಚಯ ಅದನ್ನು ದರ್ಮ ಕಾರ್ಯಕ್ಕಾಗಿಯೇ ಉಪಯೋಗ ಶ್ರೇಯಸ್ಕರ ಹಸಿವಿನಿಂದ ಪೀಡಿತನಾದ ಅತಿದಿಗೆ ನೀಡಿದ ಪಾನೀಯ, ಆಹಾರ, ಅಪಾರವಾದ ಫಲವನ್ನು ನೀಡುವುದು ಎಂಬುವುದನ್ನು ಹೇಳುವಾಗ ರಂತಿದೇವನು ಋಷಿಗಳಿಗೆ ನೀಡಿದ ಫಲ ಮೂಲ ಪತ್ರಗಳಿಂದ ಪಡೆದ ಪುಣ್ಯ ಕದೆ, ಶೈಬ್ಯನು ಮಾರರನೆಂಬ ಋಷಿಗೆ ನೀಡಿದ ಪಣ್ಣು ಹಂಪಲಗಳಿಂದ ಪಡೆದ ಭಾಗ್ಯ ಉದಾಹರಣೆಗಳಿಂದ ಅತಿಥಿ ಸತ್ಕಾರದ ಮಹತ್ವವನ್ನು ಜನಕನಿಗೆ ಬೋದಿಸಿದರು ಐದು ವಿದವಾದ ಋಣಗಳಿಂದ ಪ್ರತಿಯೊಬ್ಬ ಮನುಷ್ಯನು ತೀರಿಸಬೇಕಾದ ಕರ್ತವ್ಯ ಅದು ತೀರುವ ವಿದಾನ ಹೇಳುವಾಗ ಪರಾಶರರು--

"ಸ್ವಾಧ್ಯಾಯೇನ ಮಹರ್ಷಿಭ್ಯೋ
ದೇವೇಭ್ಯೋ ಯಜ್ಞಕರ್ಮಣಾ
ಪಿತೃಭ್ಯಃ ಶ್ರಾದ್ಧ ದಾನೇನ
ನೃಣಾಮಭ್ಯರ್ಚನೇನ ಚ

ವೇದಶಾಸ್ತ್ರಗಳ ಅಧ್ಯಯನದಿಂದ ಋಷಿಋಣ ವನ್ನೂ, ಯಜ್ಞ ಯಾಗಾದಿಗಳಿಂದ ದೇವಋಣ ವನ್ನೂ, ಶ್ರಾದ್ಧದಾನಗಳಿಂದ ಪಿತೃ ಋಣವನ್ನೂ, ಸ್ವಾಗತ, ಸತ್ಕಾರ ಸೇವೆಗಳಿಂದ ಅತಿದಿ ಋಣವನ್ನೂ, ಪ್ರತಿಯೊಬ್ಬರೂ ಪರಿಪರಿಸಿಕೊಳ್ಳಬಹುದು ಧ್ಯಾನ ಮನನಗಳಿಂದ ಆತ್ಮ ಋಣವನ್ನೂ, ಕುಟುಂಬ ಮತ್ತೆ, ಪಾಲನೆಯಿಂದ ಭೃತ್ಯಋಣವನ್ನೂ ತೀರಿಸ ಕೊಳ್ಳಬಹುದು ಎಂಬುವುದಾಗಿ ಪರಾಶರರ ಮತ ಅಸಿತ, ದೇವಲ, ನಾರದ, ಪರ್ವತ, ಕಕ್ಷೀವಂತ, ಪರ ಶುರಾಮ, ತಾಂಡ್ಯ, ವಶಿಷ್ಠ, ಜಮದಗ್ನಿ, ವಿಶ್ವಾಮಿತ್ರ, ಅತ್ರಿ, ಬರದ್ವಾಜ, ಹರಿಶ್ಮಶ್ರು, ಕುಂಡದಾರ, ಶ್ರುತ ಶ್ರವಸ -- ಇವರೆಲ್ಲರೂ ವೇದಗಳನ್ನು ಅಧ್ಯಯನ ಮಾಡಿ ಅದರಲ್ಲಿ ಉಕ್ತವಾಗಿರುವ ಋಕ್ಕುಗಳಿಂದ ಮಹಾವಿಷ್ಣುವನ್ನು ಸ್ತುತಿಸಿ ಅಭ್ಯುದಯವನ್ನು ಪಡೆ ದರು ಎಂಬುವುದಾಗಿ ಪರಾಶರರು ಜನಕ ಮಹಾ ರಾಜನಿಗೆ ಉಪದೇಶಮಾಡಿದರು

ವರ್ಣಾಶ್ರಮ ಧರ್ಮಗಳ ಮಹತ್ವ, ದಾನಗಳ ಮಹತ್ವ, ಸರಿಯಾದ ರೀತಿಯಲ್ಲಿ ಸಂಪಾದಿಸಿದ ಐಶ್ವರ್ಯ ಪ್ರಶಂಸೆ ದರ್ಮ ಮಾರ್ಗವೇ ಸರಿಯಾದ ಮಾರ್ಗ ಸ್ವದರ್ಮವೇ ಶ್ರೇಯಸ್ಸಿಗೆ ಗುರಿ ರಾಗ ದ್ವೇಷಾದಿಗಳಿಂದ ಉಂಟಾಗುವ ದುರ್ಗತಿ, ಧನದ ಅತಿ ಆಸೆ, ಲೋಭಿತನ, ವೈರಾಗ್ಯ ಜೀವನ, ಧ್ಯಾನ ಮನನಗಳ ಸಾದನೆಗಳ ಫಲ, ವಿಶೇಷ ಸಾಮಾನ್ಯ ದರ್ಮಗಳ ವಿವರಣೆ ಪರಾಶರರು ತಮ್ಮ ಪರಾಶ ರಗೀತೆಯಲ್ಲಿ ವಿವರಿಸಿದ್ದಾರೆ ಸಾಧಾರಣ ಧರ್ಮ ಗಳು ಎಲ್ಲಾ ವರ್ಣದವರಿಗೂ ಒಂದೇ ಎಂಬುವು ದಾಗಿ ಹೇಳುವಾಗ ಪರಾಶರರು ಈ ಕೆಳಗೆ ಕಂಡತೆ ಹೇಳಿದ್ದಾರೆ --

"ಆನೃ ಶಂಸ್ಯ ಮಹಿಂಸಾ ಚಾ
ಪ್ರಮಾದಃ ಸಂವಿಬಾಗಿತಾ
ಶ್ರಾದ್ಧ ಕರ್ಮಾತಿದೇಯಂ ಚ
ಸತ್ಯಮಕ್ರೋದ ಏವ ಚ
ಸ್ವೇಷು ದಾರೇಷು ಸಂತೋಷಃ
ಶೌಚಂ ನಿತ್ಯಾನ ಸೂಯತಾ
ಆತ್ಮಜ್ಞಾನಂ ತಿತಿಕ್ಷಾ ಚ
ಧರ್ಮಾಃ ಸಾದಾರಣಾ ನೃಪ"

ಕೊನೆಯದಾಗಿ ಪರಾಶರರು ಮನುಷ್ಯನಿಗೆ ಮರ ಣವು ಯಾವುದೇ ಸಮಯದಲ್ಲಾದರೂ ಬರಬ ಹುದು ಆದ್ದರಿಂದ ಸದಾ ಕಾಲದಲ್ಲೂ ದರ್ಮ ಕಾರ್ಯ ಮಾಡುವುದೇ ಶ್ರೇಯಸ್ಕರ ಎಂಬುವುದಾಗಿ ಉಪದೇಶ ಮಾಡಿದ್ದಾರೆ (ಸದಾ ಹಿ ದರ್ಮಸ್ಯ ಕ್ರಿಯೈವ ಶೋಭನಾ)

## ಪರಾಶರ ಹೋರಾಶಾಸ್ತ್ರ :

ಪರಾಶರರು ಹೇಳಿರುವ ಜ್ಯೋತಿಷ್ಯ ಶಾಸ್ತ್ರಕ್ಕೆ ಬೃಹತ್ ಪರಾಶರ ಹೋರಾಶಾಸ್ತ್ರವೆಂದು ಹೆಸರು ಹೋರಾ ಅಂದರೆ ಸಂಸ್ಕೃತದಲ್ಲಿ ಗಂಟೆ ಎಂದು ಕರೆಯುತ್ತಾರೆ ಪ್ರತಿ ಹೋರೆಗೂ ಸೂರ್ಯ ಚಂದ್ರಾದಿ ಗತಿಗಳ ಸಂಬಂದದಿಂದ ಮಾನವನ ಜೀವನದಲ್ಲಿ ಏರು ಪೇರುಗಳು, ಸುಖದುಃಖಗಳು ಸಂಭವ ಅನುಭವವಾಗಿದೆ ಮೊತ್ತ ಮೊದ ಲನೆಯದಾಗಿ ಮನುಷ್ಯರ ಉಪಯೋಗಕ್ಕೆ ಪ್ರತಿ ಹೋರೆಗೂ ಗ್ರಹಗಳ ಪ್ರಭಾವವನ್ನು ವಿವರಿಸಿದ ಕೀರ್ತಿ ಪುರುಷ ಪರಾಶರರು ಜ್ಯೋತಿಷ್ಯ ಶಾಸ್ತ್ರವು ವೇದದ ಷಡಂಗಗಳಲ್ಲಿ ಒಂದಾಗಿದೆ ಯಜುರ್ವೇ ದದಲ್ಲಿ ಜ್ಯೋತಿಷ್ಯ ಬಗ್ಗೆ ಪೂರ್ಣವಾಗಿ ಪ್ರಶಂಸಿಸಲಾ ಗಿದೆ ಜ್ಯೋತಿಷ್ಯ ಶಾಸ್ತ್ರಕ್ಕೆ ಪ್ರಮಾಣ ಸಾಕ್ಷಿ ಸೂರ್ಯ ಚಂದ್ರರೇ ಎಂಬುವ ನಾಣ್ಣುಡಿ ಸುಳ್ಳಲ್ಲ ಪೂರ್ವ ಜನ್ಮದ ಪಾಪಪುಣ್ಯಗಳ ಫಲದಿಂದ ಮಾನವ ಜನ್ಮ ವೆತ್ತುತ್ತಾನೆ ಅವನು ಹುಟ್ಟಿದ ಹೋರೆಯಿಂದ ಲಗ್ನ, ರಾಶಿ, ದಶಾಫಲಗಳನ್ನು ಭಾವಫಲಗಳನ್ನು ಕೂಲಂಕಷವಾಗಿ ಪರಾಶರರ ಹೋರಾ ಶಾಸ್ತ್ರದಲ್ಲಿ ವಿವರಿಸಿದ್ದಾರೆ ಹಿಂದೆ ಕಾಶ್ಮೀರದೇಶದಲ್ಲಿ ಭದ್ರ ಸೇನನೆಂಬ ರಾಜನಿದ್ದನು ಆತನ ಮಗ ಸುದ ರ್ಮನು ಪರಾಶರ ಮಹರ್ಷಿ ಆತನ ಜಾತಕ ವನ್ನು ನೋಡಿ ಆತನು ಅಲ್ಪಾಯುವೆಂದು ತಿಳಿದು ಅವನು ದೀರ್ಘಾಯಸ್ಸುವಾಗಿ ಬಾಳಲು ಪರಿವಾರ ವನ್ನೂ ರುದ್ರಜಪವನ್ನು ಬೋಧಿಸಿ ಚಿರಕಾಲ ಬದ ಕುವಂತೆ ಮಾಡಿದ ವೃತ್ತಾಂತ ಬ್ರಹ್ಮೋತ್ತರ ಖಂಡ ದಲ್ಲಿ ಉಲ್ಲೇಖನವಿದೆ

ಇಂತಹ ಪರಮ ವಿಷ್ಣುಭಕ್ತ, ಪುರಾಣ ಪ್ರವರ್ತಕ, ಬೃಹತ್ ಜಾತಕಹೋರಾ ಶಾಸ್ತ್ರಕರ್ತೃ, ಸರ್ವಶಾಸ್ತ್ರ ಪ್ರವೀಣ, ವೇದ--ವೇದಾಂತ ಶಿಲ್ಪ, ನೀತಿ, ವೈದ್ಯ ಶಾಸ್ತ್ರಗಳ ಸಂಶೋದನಾ ಕರ್ತೃ ಪರಾಶರ ಮಹಾ ಮುನಿಗಳಿಗೆ ನಮೋ ನಮಃ



## ಕರ್ನಾಟಕದ ಕಬೀರದಾಸ

# ಶಿಶುನಾಳ ಶರೀಫ ಸಾಹೇಬರು

---ಗುರುನಾಥ ಇನಾಮದಾರ.

ದಾರವಾಡ ಜಿಲ್ಲೆಯ ಸಿಗ್ಗಾಂವಿ ತಾಲೂಕಿನ ಶಿಶುನಾಳ ಒಂದು ಸಣ್ಣ ಹಳ್ಳಿ ಆ ಹಳ್ಳಿಯ ಹೊರಬಾಗದಲ್ಲೊಂದು ಒಂದು ಗದ್ದುಗೆ ಅದು ಯಾವದೊಂದು ದರ್ಮದ ಮಾದರಿಯಲ್ಲೂ ಇಲ್ಲ ವಿಶಾಲವಾದ ಚೌಕಾಕಾರದ ಗದ್ದುಗೆ ಮಾತ್ರ ಅದರ ಎಡ ಭಾಗವಲ್ಲಿ ಮಹಮ್ಮದೀಯರು ತಮ್ಮ ದರ್ಮದಂತೆ ನಮಾಜು ಮಾಡುತ್ತಾರೆ ಸಕ್ಕರೆ ಓದಿಕೆ ಮಾಡುತ್ತಾರೆ ಬಲಭಾಗದಲ್ಲಿ ಹಿಂದುಗಳು ಕಾಯಿ ಕರ್ಪೂರಗಳನ್ನು ಅರ್ಪಿಸಿ ಪೂಜೆ ಮಾಡುತ್ತಾರೆ ಆ ಗದ್ದುಗೆಯ ಬಳಿ ಅವನು, ಇವನು, ಅದು, ಇದು ಎಂಬ ಸಂಕುಚಿತ ಬುದ್ದಿಯಿಲ್ಲ ಎಲ್ಲರೂ ಒಂದೇ ಎಂಬ ಭಾವ ಅಲ್ಲಿ ನೆರೆದವರೆಲ್ಲರ ಹೃದಯದಲ್ಲೂ ಮಿಡಿಯುತ್ತಿದೆ

ಆ ಗದ್ದುಗೆಯ ಬಲಭಾಗದಲ್ಲಿ ಇಡೀ ಅಂಗಳವನ್ನು ವ್ಯಾಪಿಸಿರುವ ವಿಶಾಲವಾದ ಬೇವಿನ ಮರವಿದೆ ಅದು ಹೊರತೋರಿಕಗೆ ಒಂದೇಯಾಗಿ ಕಂಡರೂ ವಸ್ತುಸ್ಥಿತಿ ಹಾಗಿಲ್ಲ ಎರಡು ಮರಗಳು ಸೇರಿ ಒಂದಾಗಿವೆ ಆ ಮರಕ್ಕೆ ಮಲ್ಲಿಗೆ ಕಂಟಿಯೊಂದು ಅಪ್ಪಿಕೊಂಡು ಅದರ ತುಂಬೆಲ್ಲ ಹರಡಿದೆ ತನ್ನ ಮೃದು, ಸುಗಂಧಯುಕ್ತ ಸುಮಗಳನ್ನು ಗದ್ದುಗೆಯ ಮೇಲೆ ಸುರಿಸಿ ನಿತ್ಯಪೂಜ ಸಲ್ಲಿಸುತ್ತಿವೆ ಮಲ್ಲಿಗೆ ಬಳ್ಳಿ ಕಹಿ ಬೇವಿನ ಮರವನ್ನು ಅಕ್ಕರಯಿಂದ ಅಪ್ಪಿಕೊಂಡಿರುವುದರಲ್ಲಿಯೂ ಅಗಮ್ಯ ಅರ್ಥವೊಂದು ಅಲ್ಲಿ ನೆರೆದ ಭಕ್ತರ ಹೃದಯದಲ್ಲಿ ಮೂಡುತ್ತದೆ

ಇಷ್ಟೊಂದು ಪ್ರಶಾಂತ, ಪವಿತ್ರವಾದ ಗದ್ದುಗೆಯಲ್ಲಿ ಪವಡಿಸಿದ ವ್ಯಕ್ತಿ ಸಾಮಾನ್ಯನಲ್ಲ ಸಾವಿರಾರು ಬಕ್ತರನ್ನು ಉದ್ಧರಿಸಿ, ಈಗಲೂ ಅವ್ಯಕ್ತ ರೂಪದಿಂದ, ಮೊರಹೊಕ್ಕ ದುಃಖಾರ್ತ ಭಕ್ತರಿಗ ಸಾಂತ್ವನವನ್ನೀಯುವ, ಶಿಶುನಾಳದ ಸಂತ ಶಿವಯೋಗಿಯೆಂದೇ, ಹೆಸರುವಾಸಿಯಾದ ಶಿಶುನಾಳದ ಶರೀಪ ಸಾಹೇಬರೇ ತಮ್ಮ ಅವತಾರ ಕಾರ್ಯದ ನಂತರ ಅನಂತ ವಿಶ್ರಾಮ ಗೈದಿದ್ದಾರೆ!

೧೯ ನೇ ಶತಮಾನದ ಪ್ರಾರಂಬದಲ್ಲಿ ಉತ್ತರ ಕರ್ನಾಟಕದಲ್ಲಿ ಯುದ್ಧಗಾಳಿ, ಬೀಕರ ಬರಗಾಲ, ಅನ್ಯರ ಆಕ್ರಮಣಗಳಿಂದ ದಾರ್ಮಿಕ ಜೀವನ ಹದಗೆಟ್ಟಿತ್ತು ಆಗ ಕವಿದ ಅದರ್ಮದ ಕತ್ತಲೆಯನ್ನು ಓಡಿಸುವುದಕ್ಕೆ ಶಿವನೇ ತನ್ನ ಗಣದೊಂದಿಗೆ ಬೂಮಿಯಲ್ಲಿ ಅವತರಿಸಿ ಬಂದನೆಂದು ಹುಬ್ಬಳ್ಳಿಯ ಶ್ರೀ ಸಿದ್ಧರವಾಡ ಮಹಾಸ್ವಾಮಿಗಳ ಚರಿತ್ರೆಯಲ್ಲಿ ಹೇಳಲಾಗಿದೆ ಬೂಮಿಯಲ್ಲಿ ಶಿವನೇ, ಸಿದ್ಧಾರೂಢರ ರೂಪ ತಳೆದನು ಉಳಿದ ಗಣಾದೀಶರು ಒಂದೊಂದು ರೂಪ ದರಿಸಿದರು ವೀರಭದ್ರನೇ, ಶಿಶುನಾಳ ಶರೀಪರ ರೂಪ ತಳೆದು ಬಂದನೆಂದು ಶ್ರೀ ಸಿದ್ಧಾರೂಡ ಸ್ವಾಮಿಗಳೇ ಸ್ಪಷ್ಟವಾಗಿ ಹೇಳಿದ್ದಾರ

ಶಿಶುನಾಳ ಗ್ರಾಮದ ಇಮಾಮು ಸಾಹೇಬರು ಸರಳ ಸಾತ್ವಿಕ ಜೀವಿಗಳು ಇಮಾಮಸಾಹೇಬರು ಮನೆಯಲ್ಲಿ ನಮಾಜು, ಮಾಡುತ್ತಿದ್ದರೆ, ಮನೆಯ ಹೊರಗಡ ಶಿಶುನಾಳಧೀಶ ಬಸವೇಶ್ವರನ ಪ್ರಾರ್ದನ, ಭಜನೆಗಳನ್ನು ಅನನ್ಯ ಮನಸ್ಸಿನಿಂದ ಮಾಡುತ್ತಿದ್ದರು ಅವರ ದಾರ್ಮಿಕ ಸೇವೆ ಕೇವಲ ತಮ್ಮ ಮನಶ್ಯಾಂತಿಗಷ್ಟೇ ಮೀಸಲಾಗಿರದೆ ಊರೊಳಗಿನ ಸರ್ವದರ್ಮದವರ ದಾರ್ಮಿಕ ಚಟುವಟಿಕೆಗಳಿಗೂ ಮೀಸಲಾಗಿತ್ತು ಇದು ಅವರ ಪರದರ್ಮ ಸಹಿಷ್ಣುತಯನ್ನು ವ್ಯಕ್ತಪಡಿಸುತ್ತವೆ

ಇಮಾಮು ಸಾಹೇಬರು 'ಜನಸೇವೆಯೇ ಜನಾರ್ದನನ ಸೇವೆ' ಯೆಂಬ ಮಾತನ್ನು ಅಕ್ಷರಶಃ ನಂಬಿ ನಡೆದವರು ಸಮಾಜ ಸೇವೆ, ಸುತ್ತಲಿನ ಹಳ್ಳಿಯಿಂದ ಬರುವ ಜನರಿಗೆ ವೈದ್ಯಕೀಯಸೇವೆ, ಗಾಳಿ, ಭೂತ ಪೀಡಿತರ ಸಂಕಟ ನಿವಾರಣೆ -- ಇಂಥ ನೂರಾರು ಕಾರ್ಯಗಳಲ್ಲಿ ತಲ್ಲೀನರಾಗಿದ್ದು ಮನ -- ಮಡದಿಯನ್ನು ಮರಯುತ್ತಿದ್ದರು ಅವರ ಪತ್ನಿ ಹಜೂಮಾಳಿಗ ಪತಿಯ ಈ ಕಾರ್ಯಗಳ ಬಗ್ಗೆ ವಿಶೇಷ ಅಕ್ಕರಯಾದರೂ ತನಗ ಮಕ್ಕಳಾಗಲಿಲ್ಲವಂಬ ಒಂದೇ ಕೊರಗಿನಿಂದ ಮನದೊಳಗ ದುಃಖಿಸುತ್ತಿದ್ದಳು ಅಂತಹವರಿಗ ಜಗತ್ತಿನ ಅಜ್ಞಾನಾಂದತೆಯನ್ನು ಕಳೆಯುವ ಜ್ಯೋತಿ ಸ್ವರೂಪದ ಶಿಶುವು ಜನಿಸಿದಾಗ ಸಂತೋಷ ದ್ವಿಗುಣವಾದಂತಾಯಿತು ಮಹಾತ್ಮಾಖಾದರಲಿಂಗರೇ ಮಗುವಿಗ 'ಶರೀಫ'! ಎಂದು ನಾಮಕರಣ ಮಾಡಿದರು

ಆದ್ಯಾತ್ಮಕ್ಷೇತ್ರದಲ್ಲಿ ಶಿಷ್ಯನು ಗುರುವಿಗಾಗಿ ಅರಸದೇ, ಗುರುವೇ, ಶಿಷ್ಯನಿಗಾಗಿ ಅಲೆಯುತ್ತಿರುತ್ತಾನಂತೆ ಶ್ರೀ ರಾಮಕೃಷ್ಣ ಪರಮಹಂಸರು ವಿವೇಕಾನಂದರ ಬಗ್ಗೆ ದಾರಿಕಾಯುತ್ತಿದ್ದುದು ಇದಕ್ಕೊಂದು ನಿದರ್ಶನ ಹಾಗೆಯೇ ಶರೀಫರ ಆಗಮನಕ್ಕಾಗಿ ಗುರು ಗೋವಿಂದಬಟ್ಟರು ಕಳಸದಲ್ಲಿ ತಮ್ಮ ಮನೆಯ ಕಟ್ಟೆಯ ಮೇಲೆ ಕುಳಿತು 'ಶರೀಪ, ಬೇಗ ಬಾರೋ' ಎಂದು ಕನವರಿಸುತ್ತಿದ್ದಾರಂತೆ ಕಳಸದಲ್ಲಿಯೇ ಕನ್ನಡ ಗಾವಠಿಶಾಲೆಯ ಶಿಕ್ಷಕರಾಗಿದ್ದ ಗೋವಿಂದಬಟ್ಟರು ಈ ಮೊದಲೇ ಹತ್ತಿಪ್ಪತ್ತು ವಿದ್ಯಾರ್ಥಿಗಳಿಗೆ ಕಲಿಸುತ್ತಿದ್ದರು ಆದರೆ ಅವರಾರೂ ತಮ್ಮ ಗುರುಗಳ ಗಮನ ಸೆಳೆದಿರಲಿಲ್ಲ ಗೋವಿಂದಭಟ್ಟರು ಸತ್‌ಶಿಷ್ಯನ ಶೋಧಕ್ಕಾಗಿ ಆಗಾಗ ಊರೂರು ಅಲೆಯುತ್ತಿದ್ದರಂತೆ ಸಣ್ಣ ಬಾಲಕರ ಗುಂಪು ಕಂಡೊಡನೆ ಅಲ್ಲಿ ಹೋಗಿ ಆ ಮಕ್ಕಳೆಲ್ಲರ ಮುಖಲಕ್ಷಣಗಳನ್ನು ಕಣ್ಣಿಟ್ಟು ಪರೀಕ್ಷಿಸುತ್ತಿದ್ದರು ಆದರೆ ತಮಗೆ ಬೇಕಾದವ ಅಲ್ಲಿಲ್ಲವೆಂದು ತಿಳಿದಾಗ ನಿಟ್ಟುಸಿರು ಬಿಟ್ಟು ಮುಂದೆ ನಡೆಯುತ್ತಿದ್ದರು 'ತಾಯಿಯ ಪಾದಕ್ಕೆ ಎಂದೂ ಬಾಡದಂಥ ಒಂದು ಪುಷ್ಪವನ್ನು ಏರಿಸಬೇಕೆಂದಿರುವ' ಎನ್ನುತ್ತ ಅಂದ ಪುಷ್ಪ ಎಲ್ಲಿ ಸಿಕ್ಕುತ್ತದಯೋ ಎಂದು ಅರಸುತ್ತ ಶಿಶುನಾಳಿಗೆ ಬಂದಾಗ ಅವರು ಅರಸುವ ಹೂ ದೊರೆತಿತ್ತು ತಮ್ಮ ಬಾಳಿನ ಎಲ್ಲ ತಪಸ್ಸನ್ನು ಬಿತ್ತಿ ಬೆಳೆಯಬಲ್ಲ ಫಲವತ್ತಾದ ಭೂಮಿ ಶರೀಫನೇ ಎಂದರಿತು ಆತನನ್ನು ಕಾಣಲು ಇಮಾಮರ ಮನೆಗೆ ಹೋದಾಗ, ಇಮಾಮರಿಗೆ ದೈವವೇ ನಡೆದು ತಮ್ಮ ಮನೆಗೆ ಬಂದಷ್ಟು ಸಂತೋಷವಾಯಿತು ಮಗನನ್ನು ಆ ಮಹಾತ್ಮರ ಕಾಲುಗಳ ಮೇಲ ಹಾಕಿ ಉದ್ಧರಿಸಬೇಕೆಂದು ಕೇಳಿಕೊಂಡರು ಅದೇ ಸಮಯದಲ್ಲಿ ಎಳೆಯಬಾಲಕ ಶರೀಫ "ಬಾಬಾ, ನನ್ನ ಕನಸಿನ್ಯಾಗ ಒಬ್ಬರು ಸಾದುಗಳು ಬಂದು ಶರೀಫಾ ಬೇಗ ಬಾರೋ" ಎಂದು ಕರೆಯುತ್ತಿದ್ದಾರೆಂದು ಹೇಳುತ್ತಿದ್ದನಲ್ಲಾ, ಅವರೇ ಇವರು" ಎಂದು ಹೇಳಿದ!

ತಮ್ಮ ಶಿಷ್ಯನಾಗುವ ಶರೀಫರ ಯೋಗ್ಯತ ಆಳತ ಮೀರಿದುದು ಎಂಬುದನ್ನು ಅಲ್ಲಿ ನೆರದಿದ್ದ ಜನತೆಗೆ ತೋರಲು ಗೋವಿಂದಭಟ್ಟರು ಚಿಕ್ಕ ಬಾಲಕ ಶರೀ

## ಶಿಲಾವಿಗ್ರಹ ನೀಡಿಕೆ ಯೋಜನೆಗಳು

ವಿವಿಧ ಹಿಂದೂ ದೇವಾಲಯಗಳಲ್ಲಿ ಪ್ರತಿಷ್ಠಾಪನೆಗಾಗಿ ತಿ ತಿ ದೇವಸ್ಥಾನಗಳು ಶಿಲಾವಿಗ್ರಹ ನೀಡುವಿಕೆಯ ಎರಡು ಯೋಜನೆಗಳನ್ನು ಅಂಗೀಕರಿಸಿವೆ

ಶಿಲಾವಿಗ್ರಹ ದಾನ ಯೋಜನೆಯಲ್ಲಿ ವಿವಿಧ ದೇವಾಲಯಗಳಿಗೆ ಪ್ರತಿಷ್ಠಾಪನೆಗಾಗಿ ಶ್ರೀ ವೆಂಕಟೇಶ್ವರಸ್ವಾಮಿ ಹಾಗೂ ಶ್ರೀ ಪದ್ಮಾವತೀದೇವಿಯವರ ವಿಗ್ರಹಗಳನ್ನು ನೀಡಲಾಗುವುದು ಇದಕ್ಕಾಗಿ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಗಳಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್‌ಗಿಂತ ಕಡಮೆಯವರಲ್ಲದ ಸ್ಥಳೀಯ ದೇವಾದಾಯ ಇಲಾಖಾಧಿಕಾರಿಗಳಿಂದ ಪ್ರಮಾಣಪತ್ರವನ್ನು ಕಳುಹಿಸಬೇಕು

ಹಿಂದೂ ದೇವಾಲಯಗಳಿಗಾಗಿ ಇತರ ಎಲ್ಲ ದೇವ ದೇವತೆಯರ ಶಿಲಾ, ಪಂಚಲೋಹ, ವಿಗ್ರಹಗಳನ್ನೂ 50 ಶತಾಂಶ ರಿಯಾಯಿತಿ ದರಗಳಲ್ಲಿ ಒದಗಿಸಲಾಗುವುದು ಇದಕ್ಕಾಗಿಯೂ ಅರ್ಜಿಗಳನ್ನು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿಯವರಿಗೆ ಕಳುಹಿಸಬೇಕು ಜೊತೆಗೇ ದೇವಾಲಯದ ನಕ್ಷೆ, ಅಸಿಸ್ಟೆಂಟ್ ಕಮಿಷನರ್ ಅವರ ಸ್ಥಾಯಿಯ ಸ್ಥಳೀಯ ಮುಜರಾಯಿ ಅಧಿಕಾರಿಯ ಪ್ರಮಾಣಪತ್ರವನ್ನು ಕಳುಹಿಸಬೇಕು ಹಣದ ಸಂದಾಯವಾದ ನಂತರವೇ ವಿಗ್ರಹಗಳ ತಯಾರಿಕೆಯ ಕೆಲಸವನ್ನು ಕೈಗೆತ್ತಿಕೊಳ್ಳಲಾಗುವುದು

ತಿರುಪತಿಯಿಂದ ವಿಗ್ರಹಗಳನ್ನು ಪಡೆದು ತಮ್ಮ ಸ್ಥಳಗಳಿಗೆ ಸಾಗಿಸುವ ಹೊಣೆ ಆಯಾ ಅಭ್ಯರ್ಥಿಗಳಿಗೇ ಸೇರಿದ್ದು

ಕಾಲದಿಂದ ಕಾಲಕ್ಕೆ ತಿ ತಿ ದೇ ಆಡಳಿತ ನಿರ್ವಾಹಕಮಂಡಳಿಯು ವಿಧಿಸುವ ಶರತ್ತುಗಳಿಗೆ ಅನುಗುಣವಾಗಿ ವಿಗ್ರಹಗಳನ್ನು ಸರಬರಾಜು ಮಾಡಲಾಗುವುದು

***ಈ ವಿಷಯದಲ್ಲಿನ ಎಲ್ಲ ವ್ಯವಹಾರಗಳಿಗೂ ಬರೆಯಬೇಕಾದ ವಿಳಾಸ--***

***ಕಾರ್ಯನಿರ್ವಹಣಾಧಿಕಾರಿ, ತಿ. ತಿ. ದೇ., ತಿರುಪತಿ--517 501.***

## ಹೊಸದಾಗಿ ಬಿಡುಗಡೆಯಾಗಿರುವ ಉತ್ಕೃಷ್ಟ ಗ್ರಂಥಗಳು

| | | |
|---|---|---|
| 1 ದೇವಾಲಯಮುಲು---ತತ್ತ್ವವೇತ್ತಲು | ತೆಲುಗು | ರೂ 7--20 |
| 2 ಭಾರತೀಯ ದೇವಾಲಯಮುಲು | " | ರೂ 5--00 |
| 3 ಅನ್ನಮಯ್ಯ ಅಂತರಂಗಮುಲೋ ಅಲಮೇಲುಮಂಗ | " | ರೂ 2--40 |
| 4 ಭಾರತಾವತರಣಂ | " | ರೂ 1--30 |
| 5 ಎ ಹ್ಯಾಂಡ್ ಬುಕ್ ಆಫ್ ಹಿಂದೂ ರಿಲಿಜನ್ | ಆಂಗ್ಲ | ರೂ 2--70 |
| 6 ಸ್ವಾಮಿ ಪಟ್ಟಿನತ್ತಾರ್ | ತಮಿಳು | ರೂ 1--00 |
| 7 ಸಂತ ತ್ಯಾಗರಾಜ | ಹಿಂದಿ | ರೂ 5--30 |
| 8 ಗುರುಜಗನ್ನಾಥದಾಸರ ಕೃತಿಗಳು | ಕನ್ನಡ | ರೂ 8--40 |

ಅಂಚೆ ವೆಚ್ಚ ಪ್ರತ್ಯೇಕ, ಎಂ ಓ ಹಣವನ್ನು (ಪುಸ್ತಕದ ಬೆಲೆ ಹಾಗೂ ಅಂಚೆ ವೆಚ್ಚ ಕನಿಷ್ಠ ರೂ 6--00) ಸೇಲ್ಸ್‌ವಿಂಗ್ ತಿ ತಿ ದೇ ತಿರುಪತಿ ಇವರಿಗೆ ಕಳುಹಿಸಿ

***ಸೇಲ್ಸ್‌ವಿಂಗ್ ಆಫ್ ಪಬ್ಲಿಕೇಷನ್ಸ್, ತಿ. ತಿ. ದೇ., ತಿರುಪತಿ.***

ಪರನ್ನು "ಶರೀಫಾ, ನಿನ್ನ ತಂದೆ ಯಾರೋ?" ಎಂದು ಕೇಳಿದರು ಗುರುಗಳು ಕೇಳಿದ ಈ ಪ್ರಶ್ನೆ ಸರಳವಾದುದಲ್ಲವೆಂದರಿತ ಶರೀಫ ಗುರುಗಳನ್ನೇ ತಿರುಗಿ "ಯಾವ ತಂದೆ ಗುರುಗಳೆ?" ಎಂದು ಮರುಪ್ರಶ್ನೆ ಹಾಕಿದ ಇದರಿಂದ ಗೋವಿಂದಭಟ್ಟರಿಗೆ ಸಂತೋಷವಾದರೂ ತೋರಗೊಡದೆ "ಹಾಗೆಂದರೇನೋ? " ಎಂದರು ಶರೀಫರು ಶಾಂತನಾಗಿಯೇ "ಗುರುಗಳೇ, ಒಂದು ಜೀವಕ್ಕೆ ಮುಖ್ಯವಾಗಿ ಹಡದಪ್ಪ ಮತ್ತು ಪಡೆದಪ್ಪ ಎಂದು ಇಬ್ಬರು ತಂದೆಯರು ಇರುತ್ತಾರೆ ಅವರಲ್ಲಿ ನೀವು ಕೇಳಿದ್ದು ಯಾರನ್ನು?" ಎಂದಾಗ ಅವನ ಮಾತಿನ ಅರ್ಥ ಗುರುಗಳಿಗಾಗಿದ್ದರೂ, ಜನರಿಗಾಗುವ ಸಲುವಾಗಿ "ಶರೀಫ, ಈ ಹಡದಪ್ಪ, ಪಡೆದಪ್ಪ ಯಾರೋ?" ಎಂದು ಕೇಳಿದರು ಆಗ ಶರೀಫರು ಶಾಂತರಾಗಿಯೇ 'ಗುರುವೇ, ಈ ಜೀವಕ್ಕೆ ದೇಹ ನೀಡುವವನೇ ಹಡೆದಪ್ಪ, ಈ ದೇಹಕ್ಕೆ ಜೀವಕ್ಕೆ ಸಂಸ್ಕಾರ ನೀಡಿ ಮುಕ್ತಿಯ ಮಾರ್ಗದಲ್ಲಿ ಕೊಂಡೊಯ್ಯುವವನೆ ಪಡೆದಪ್ಪ' ಎಂದು ಅವರ ಕಾಲಿಗೆರಗಿದರಂತೆ ಆಗ ಹರ್ಷಪುಲಕಿತರಾದ ಗೋವಿಂದಭಟ್ಟರು 'ನನ್ನ ಬಯಕೆಯನ್ನು ನನ್ನ ತಾಯಿ ಶಾಕಾಂಬರಿ ಇಂದು ನೆರವೇರಿಸಿದಳು' ಎಂದು ಶರೀಫರನ್ನು ಅಪ್ಪಿಕೊಂಡರು ಆ ಅಕ್ಕರೆಯ ಅಪ್ಪುಗೆಯಲ್ಲಿ ಗುರು ಬ್ರಾಹ್ಮಣನೂ ಆಗಿರಲಿಲ್ಲ, ಶಿಷ್ಯ ಮಹಮ್ಮದಿಯನೂ ಆಗಿರಲಿಲ್ಲ ಕೇವಲ ಗುರು -- ಶಿಷ್ಯರಾಗಿದ್ದರು

ಕಳಸದ ಗಾವಠಿ ಶಾಲೆಯಲ್ಲೇ ಶರೀಫರು ಆಗಿನ ಮುಲ್ಕೀ ಪರೀಕ್ಷೆಯವರೆಗೆ ಓದಿದರು ಶಾಲಾಬಾಲಕರಾಗಿದ್ದಾಗ ಶರೀಫರು ಗುರುಗಳ ಕಾಲಬಳಿಯೇ ಮೈ ಮುದುಡಿಕೊಂಡು ಕುಳಿತಿರುತ್ತಿದ್ದರು ಗುರುಗಳು ಹೇಳುವಾಗ ಮೈಯಲ್ಲಾ ಕಿವಿಯಾಗಿ ಕೇಳುತ್ತಿದ್ದ, ಉಳಿದ ಸಮಯದಲ್ಲಿ ಶೂನ್ಯದಲ್ಲಿ ಲಕ್ಷ್ಯವಿಟ್ಟು ಏನನ್ನೋ -- ನೋಡುತ್ತ ತಮ್ಮೊಳಗೆ ತಾನಾಗಿ ಮೈಮರೆಯುತ್ತಿದ್ದ ಅವರಿಗೆ ಆಟ ಪಾಠಗಳಲ್ಲಿ ಹೆಚ್ಚಿನ ಅಭಿರುಚಿಯಿರಲಿಲ್ಲ ಆದರೆ ಗೋವಿಂದ ಭಟ್ಟರು ಹಾಡುತ್ತಿದ್ದರೆ ತದೇಕ ಚಿತ್ತರಾಗಿ ಕುಳಿತು ಕೇಳುತ್ತಿದ್ದ ಅಲ್ಲಿದ್ದ ವಿದ್ಯಾರ್ಥಿಗಳೆಲ್ಲ ತಮ್ಮ ತಮ್ಮ ಪಾಟೀಗಳ ಮೇಲೆ ಲೆಕ್ಕಬಿಡಿಸಿ ಗುರುಗಳ ಎದುರಿಗೆ ಟೇಬಲ್ಲಿನ ಮೇಲೆ ಹಾಕುತ್ತಿದ್ದರು ಶರೀಫ ಮಾತ್ರ ಸ್ವಚ್ಛವಾಗಿ ತೊಳೆದ ಪಾಟಿಯನ್ನು ಮೇಲೆ ಒಂದಕ್ಷರವನ್ನು ಮೂಡಿಸದೆ ಎಲ್ಲರ ಪಾಟಿಗಳ ನಡುವೆ ಸೇರಿಸುತ್ತಿದ್ದ ನಂತರ ಗುರುಗಳು ಆ ಪಾಟಿಗಳನ್ನೆತ್ತಿಕೊಂಡು ನೋಡುತ್ತ 'ಇದು ಹೊಲಸು ತಿದ್ದಲು ಶಕ್ಯವಿಲ್ಲ' 'ಇದು ತಪ್ಪು, ತಿದ್ದಬಹುದು' ಎಂದು ಹೇಳುತ್ತ ಶರೀಫರ ಪಾಟಿ ತೆಗದುಕೊಡಾಗ ಎರಡೂ ಬದಿಗೂ ನೋಡಿ "ಇದು ಅಂತರಂಗ ಬಹಿ

ರಂಗ ಎರಡೂ ಬದಿಗೂ ಬಲು ಸ್ವಚ್ಛ, ಶುದ್ಧ ಈ ಭೂಮಿ ಹದಕ್ಕೆಬಂದಿದೆ, ಇಲ್ಲಿ ಕಸವಿಲ್ಲ, ಕಳೆಯಿಲ್ಲ, ಬೀಜ ಬಿತ್ತಲು ಯೋಗ್ಯವಾಗಿದೆ ಎನ್ನುತ್ತಾ ಶರೀಫರನ್ನು ಮುದ್ದಾಡುತ್ತಿದ್ದರಂತೆ

ಒಮ್ಮೆ ಗೋವಿಂದಭಟ್ಟರು ತಮ್ಮ ಹೊಲದಲ್ಲಿಯ ಬನ್ನಿ ಮಹಾಂಕಾಳಿಯ ಪೂಜೆಗೆ ತಮ್ಮ ಶಿಷ್ಯರನ್ನು ಕರೆದುಕೊಂಡು ಹೋಗಿದ್ದರು ಅವರೆಲ್ಲ ಹೊಲದ ಬಳಿ ಬಂದರು ಹೊಲದ ಸುತ್ತ ಮುಳ್ಳು ಬೇಲಿ ಒಳಗೆ ಹೋಗಲು ದಾರಿಯೇ ಇಲ್ಲ ಆಗ ಗುರುಗಳು ತಮ್ಮ ಮೊಚ್ಚೆಯನ್ನು ಮುಳ್ಳಿನ ಹೆಂಟೆಯ ಮೇಲಿಟ್ಟು ಅತ್ತ ದಾಟಿ, ತಮ್ಮ ಶಿಷ್ಯರಿಗೂ ಅವೇ ಮೊಚ್ಚೆಗಳ ಮೇಲೆ ಕಾಲಿಟ್ಟು ಹೊಲದಲ್ಲಿ ಬರಲು ಹೇಳಿದರು ಆದರೆ ಅವರಾರು ಅದಕ್ಕೆ ಸಿದ್ಧರಾಗಲಿಲ್ಲ ಏಕೆಂದರೆ ಅವು ಗುರುಗಳ ಪಾದರಕ್ಷೆಗಳು ಅವುಗಳನ್ನು ತುಳಿಯುವುದೇ? ಎಂದು ತರ್ಕಿಸುತ್ತ ನಿಂತಿರುವಾಗಲೇ ಗುರುಗಳು ಶರೀಪನತ್ತ ನೋಡಿ "ಶರೀಫಾ, ನೀನು ಈ ಕಡೆ ಬರುತ್ತಿಯಾ?" ಎಂದು ಕೇಳಿದರು ತಕ್ಷಣವೇ ಶರೀಫ "ಗುರುವೇ, ನಿನ್ನಾಜ್ಞೆ, ಇದೊ ಬಂದೆ" ಎಂದವರೆ ಗುರುಗಳ ಮೊಚ್ಚೆಯ ಮೇಲೆ ಕಾಲಿಟ್ಟು ಅತ್ತ ಜಿಗಿದರು ಆಗ ಉಳಿದ ಶಿಷ್ಯರೆಲ್ಲ 'ಗುರುಗಳ ಪಾದರಕ್ಷೆ ಮೆಟ್ಟಿದ ಗುರುದ್ರೋಹಿ ಈ ಶರೀಫ' ಎಂದು ನಿಂದಿಸಲು ಪ್ರಾರಂಭಿಸಿದಾಗ ಗೋವಿಂದಭಟ್ಟರು ಅವರನ್ನು ಕುರಿತು "ಹುಚ್ಚಪ್ಪಗಳಿರಾ, ನೀವು ನನ್ನ ತೊಗಲು ಮೊಚ್ಚೆಗಳಿಗೆ ಎಲ್ಲಿಲ್ಲದ ತಾತ್ವಿಕ ಮಹತ್ವ ಕೊಟ್ಟು, ನನ್ನ ನಾಲಿಗೆಯ ಆಜ್ಞೆಯನ್ನು ತುಳಿದು ಹಾಕಿದಿರಿ ಶರೀಫನು ನನ್ನ ಮೊಚ್ಚೆಯನ್ನು ತುಳಿದನು ಆದರೆ ನನ್ನ ಆಜ್ಞೆಗೆ ಗೌರವ ನೀಡಿದನು ಇದರಲ್ಲಿ ಯಾರು ಗುರುದ್ರೋಹಿಗಳು, ನೀವೇ ನಿರ್ಣಯಿಸಿರಿ?" ಎಂದಾಗ ಶಿಷ್ಯರೆಲ್ಲಾ ತಮ್ಮ ಅಜ್ಞಾನಕ್ಕೆ ಲಜ್ಜೆ ಹೊಂದಿ ತಲೆ ತಗ್ಗಿಸಿದರಂತೆ

ಕಳಸದಲ್ಲಿ ಗೋವಿಂದ ಭಟ್ಟರು ಶರೀಫರನ್ನು ತಮ್ಮ ಒಲವು, ಇಚ್ಛೆಗನುಸಾರವಾಗಿ ಬೆಳೆಸಿದರು ಗುರುಗಳ ಆಸೆಗಿಂತ ಮೊಳ ಎತ್ತರವಾಗಿಯೇ ಶಿಷ್ಯ ಬೆಳೆದ ಅದರಿಂದ ಗುರುಗಳಿಗಾದ ಆನಂದಕ್ಕೆ ಎಣೆಯೇ ಇಲ್ಲವಾಯಿತು ಶರೀಫರ ಅಭ್ಯಾಸವೆಲ್ಲ ಮುಗಿದ ಮೇಲೆ "ಶಿಶುನಾಳದಲ್ಲೆ ಇದ್ದು, ಶಿಕ್ಷಕನಾಗಿ ಮಕ್ಕಳಿಗೆ ವಿದ್ಯೆ ಹೇಳಿಕೊಡು, ತಂದೆ--ತಾಯಿಗಳ ಸೇವೆ ಮಾಡು, ಜನ ಜೀವನವನ್ನು ತೆರೆದ ಕಣ್ಣಿಗಳಿಂದುನೋಡು, ಬದುಕಿನ ಆಗು -- ಹೋಗುಗಳಿಗೆಲ್ಲ ಕೇವಲ ಸಾಕ್ಷಿಯಾಗಿರು ನಿನಗೆ ಹೇಳಬೇಕಾದುದನ್ನು ಹೃದಯಂಗಮವಾಗಿ ಹೇಳುವ ಕಲೆ ನಿನಗೆ ಪ್ರಾಪ್ತವಾಗುವ ಕಾಲ ಬಂದಿದೆ ಬಾಳಿನ ಆಳೆತ್ತರಗಳನ್ನು ಕಾಣುವ ದೈವೀ ಹಸಿವಾಗುತ್ತದೆ ಆ ಅನ್ನದ ಅವಶ್ಯಕತೆ ನನಗೆ ಅವಶ್ಯಕವಾದಾಗ ನೀನೇ ಓಡಿ ಬರುತ್ತಿ ಆಗ ದೀಕ್ಷಾ ಗುರುವಾಗಿ ದಾರಿ ತೋರುತ್ತೇನೆ" ಎಂದು ಹರಸಿದರು

ಶರೀಫರು ಗುರುಗಳ ಆಣತಿಯಂತೆ ಶಿಶುನಾಳಕ್ಕೆ ಬಂದರು ಶಿಕ್ಷಕರಾಗಿ ಕಾಯಕ ಪ್ರಾರಂಭಿಸಿದರು ಜೊತೆಗೆ ತಮ್ಮ ಅಂತರಂಗ ಉನ್ನತಿಯ ಸಾದನೆಯೂ ನಡೆದಿತ್ತು ಸಾದನೆಯ ಹಾದಿಯಲ್ಲಿ ಸಾಧಕರು ಕೆಲವೊಮ್ಮೆ ಮುಗ್ಗರಿಸುವುದುಂಟು ಆಗ ಮೇಲೆದ್ದು ಚೇತರಿಸಿಕೊಂಡರೆ ಮುನ್ನಡೆಯುತ್ತಾನೆ, ಇಲ್ಲದಿದ್ದರೆ ಅದಃಪತನದ ಪಾತಾಳಕ್ಕಿಳಿಯುತ್ತಾನೆ ಸಾಧಕರನ್ನು ಮಾಯೆ ಅಡಗಟ್ಟಿ ಪರೀಕ್ಷಿಸುವುದೂ ಉಂಟು ಅಂದ ಪರೀಕ್ಷೆಯನ್ನು ಶರೀಫರೂ ಎದುರಿಸಿ, ಯಶಸ್ವಿಯಾದವರೇ ಗುರುಗಳಿಂದ ದಿವ್ಯ ಜ್ಞಾನ ಪಡೆಯುವ ದಿನದಂದೇ ಮಾಯೆ ಹೆಣ್ಣಾಗಿ ಅವರನ್ನು ಕ್ಷಣಕಾಲ ಬಂದಿಸಿದಾಗ, ತಮ್ಮ ಮನಸ್ಸು ಹೆಣ್ಣಿಗಾಗಿ ಸೋತಿತಲ್ಲವೆಂದು ಶರೀಫರು ಸಂಜೆವರೆಗೆ ಚಿಂತಿಸುತ್ತ ಕುಳಿತು ನಂತರ ಈ ಪಾಪ ಕಳೆಯಲು ಪ್ರಾಯಶ್ಚಿತ್ತವೇ ಸೂಕ್ತವೆಂದುಕೊಂಡು, ಮೋಹಗೊಳಿಸಿದ ಹೆಣ್ಣಿನ ಬಳಿ ಹೋಗಿ ಚಾವಟೀ ಏಟಿನ ಭಿಕ್ಷೆ ಬೇಡಿದರು ಆಕೆ ಪರಿಪರಿಯಿಂದ ಬೇಡವೆಂದು ಕೇಳಿಕೊಂಡರೂ ಒಪ್ಪದ ಶರೀಫರಿಗೆ ಕೊನೆಗೆ ಚಾವಟಿಯಿಂದ ಮೈಮೇಲೆ ಬಾಸುಂಡೆಗಳು ಮೂಡುವಂತೆ ಬಾರಿಸಿದಳು ರಕ್ತ ಚಿಮ್ಮಿತ್ತು ಶಿಷ್ಯನ ಈ ನೋವು ಗುರುಗಳಿಗೆ ಅರಿವಾಯಿತು ಅವರು ಓಡೋಡಿ ಬಂದರು ಶರೀಪರು "ತಂದೆ, ನನ್ನ ಅಪರಾಧ ಮನ್ನಿಸು" ಎಂದಾಗ ಅವರು "ಶರೀಫ, ಇದು ಅಪರಾದವಲ್ಲ ಆತ್ಮೋದ್ಧಾರದ ಪ್ರದಮ ಸೋಪಾನ ಪ್ರಾಯಶ್ಚಿತ್ತದಿಂದ ಪರಿಶುದ್ಧವಾದ ಪವಿತ್ರ ಸ್ನಾನವಿದು ಈ ಸ್ನಾನದಿಂದ ನೀನು ಎಷ್ಟೊಂದು ಸ್ವಚ್ಛ, ನಿರ್ಮಲವಾಗಿರುವಿಯೆಂದರೆ ನೀನಿನ್ನು ಸ್ನಾನವನ್ನೆ ಮಾಡಬೇಕಿಲ್ಲ" ಎಂದು ಹೇಳಿ ಅವನನ್ನಪ್ಪಿಕೊಂಡರು

ಶರೀಫರು ಗುರು ಗೋವಿಂದಭಟ್ಟರಿಂದ ಆಧ್ಯಾತ್ಮಜ್ಞಾನ ದೀಕ್ಷೆ ಪಡೆದು, ತಮ್ಮ ಶಿಷ್ಯರಿಗೆ, ಜನಸಾಮಾನ್ಯರಿಗೆ ಆ ಜ್ಞಾನವನ್ನು ಆಡುಮಾತಿನ ವಚನಗಳಲ್ಲಿ ಹಾಡಿ ಹೇಳುತ್ತಿದ್ದರು ವರಕವಿಗಳಾಗಿದ್ದ ಶರೀಫರು ಜೀವನದ ವಿಶಾಲ ಬೀದಿಗಳಲ್ಲಿ ಸಂಚರಿಸಿದರು ಅವರು ಕಂಡ ಸಾಮಾನ್ಯ ಸಂಗತಿಗಳೇ ಅವರಿಗೆ ಕಾವ್ಯ ವಸ್ತುಗಳಾದವು. ಲೌಕಿಕ ಸಾಮಾನ್ಯ ಸಂಗತಿಗಳು ಅಸಾಮಾನ್ಯ ತತ್ವಪದಗಳಾದವು. ಹಳ್ಳಿಯ ಜನರೊಂದಿಗೆ ಸಾಮಾನ್ಯರಾಗಿಯೇ ಬದುಕಿದ ಶರೀಫರು ಮನುಷ್ಯನ ಆತ್ಮಕಲ್ಯಾಣಕ್ಕಾಗಿ ಹಗಲಿರಳೂ ಹಾಡಿದರು, ಮಿಡಿದರು, ದಣಿದರು

ಪರಕೆ ಹೊತ್ತು ಹೆತ್ತ ತಮ್ಮ ಮಗ ಹೀಗೆ ಅಲೆಯುವುದು ತಾಯಿಗೆ ಮಾತ್ರ ಸಮಾದಾನ ನೀಡಲಿಲ್ಲ ಮಗನಿಗೊಂದು ಮದುವೆ ಮಾಡಿ ವರ ಪರಮಾರ್ಥದ ಹುಚ್ಚು ಬಿಡಬಹುದೆಂದು ಆಸೆ ಹೊತ್ತ ತಂದೆ--ತಾಯಿಗಳು ಕುಂದಗೋಳ ಗ್ರಾಮದ ಗಾಯಕ ಮನೆತನದ ಕನ್ಯೆಯನ್ನು ಶರೀಫರಿಗಾಗಿ ಗೊತ್ತುಮಾಡಿದರು ಇದನ್ನು ತಿಳಿದ ಶರೀಫರು ತಮ್ಮ ಗುರುಗಳ ಬಳಿ ಬಂದು -- "ತಂದೇ, ಸಂಸಾರ ಮೋಹ ಮಾಯೆಗಳು ದೊಡ್ಡ ಆಗರ ನಾನು ಸಂಸಾರಿಯಾದರೆ ಮೋಹ ಮಾಯೆಗಳು ನನ್ನನ್ನು ಮುಕ್ಕಿ ಬಿಡಬಹುದಲ್ಲವೇ?" ಎಂದು ಕೇಳಿದರು ಆಗ ಗೋವಿಂದಭಟ್ಟರು ನಕ್ಕು "ಶರೀಫ, ಎಷ್ಟು ಮಳೆಯಾದರೆ ಗಾಳಿ ಬೆಳಕುಗಳು ತೊಯ್ಯಬಲ್ಲವೋ?" ಎಂದು ಕೇಳಿ 'ಸಂಸಾರ ತ್ಯಾಜ್ಯವಲ್ಲ, ಹೇಯವಲ್ಲ, ಅದು ಬಾಳಿನ ಕುರುಕ್ಷೇತ್ರ ಸಂಸಾರದಲ್ಲಿದ್ದುಕೊಂಡೇ ಸಂನ್ಯಾಸಿಯಾಗಲು ಸಾಧ್ಯ' ಎಂದು ಹೇಳಿದ್ದರು 'ಬೀಳಬಾರದೋ ಕೆಸರಿನಲಿ ಜಾರಿ' ಎಂದು ಹಾಡಿದ್ದ ಶರೀಫರು ಸಂಸಾರದೊಳು ಬಿದ್ದರು ಫಾತಿಮಾ ಅವರ ಹೆಂಡತಿಯಾಗಿ ಶರೀಫರ ಮನೆಗೆ ಬಂದಳು

ಫಾತಿಮಾ ಶರೀಫರಿಗೆ ತಕ್ಕ ಹೆಂಡತಿ ಯಾಗಿದ್ದಳು ಅವಳು ಎಂದೂ ಏನನ್ನು ಬಯಸಲಿಲ್ಲ ಪತಿಯ ಸುಖ ದುಃಖಗಳಲ್ಲಿ ಒಂದಾಗಿ, ಅವರ ಬದುಕಿನ ಆಸರೆಯ ಊರುಗೋಲಾದಳು ಸಂಸಾರ ಸವಿಸುಖದ ಫಲವಾಗಿ ಶರೀಫರಿಗೆ ಒಬ್ಬಳು ಮಗಳು ಜನಿಸಿದಳು ಅವಳೇ ಲತ್ತುಮಾ ಶರೀಫರ ಕೈಹಿಡಿದ ಫಾತಿಮಾ ಬಹಳದಿನ ಬದುಕಲಿಲ್ಲ ತವರಿಗೆ ಹೋಗುವಾಗ 'ನೀ ತಿರುಗಿ ಬರುವುದಿಲ್ಲ' ಎಂಬ ಶರೀಫರ ಮಾತು ನಿಜವಾಯಿತು 'ನಾನು ಮದುವೆಯ ದಿವಸ ಮನೆಗೆ ತಂದ ಮಣ್ಣಿನ ಕುಡಿಕೆ ಒಡೆದು ಹೋಯಿತೋ' ಎಂದು ಶರೀಫರು ಹಾಡುತ್ತ, ತಮ್ಮ ಬಾಳಿನ ಸೆರಗಿಗೆ ಅಂಟಿಕೊಂಡ ಹೆಂಡತಿಯೆಂಬ ಮೋಹದ ಎಳೆಯು ಹರಿದು ಹೋದುದಕ್ಕಾಗಿ ವ್ಯಥೆ ಪಟ್ಟರು

ಸಂಸಾರಿಯಂತೆ ಸನ್ಯಾಸಿಯೂ ತಾಯಿಯ ತೊಡೆಯ ತೊಟ್ಟಿಲಿನಿಂದಲೇ ಇಳಿದು ಬರುತ್ತಾನೆ ಸಾಮಾನ್ಯನಿಗೆ ಮುತ್ತುವ ಮೋಹ ಮಾಯೆಗಳು ಅವನಿಗೂ ಕವಿಯುತ್ತವೆ. ಅವುಗಳನ್ನು ಅವನು ಗೆಲ್ಲುತ್ತಾನೆ ಒಳಗಿನ ಕತ್ತಲೆಯನ್ನು ಕಳೆದುಕೊಂಡು ಬೆಳಗಾಗುತ್ತಾನೆ ದೇವ ನಿಷ್ಠೆ ಅವನಲ್ಲಿ ಬಲಿಯುತ್ತದೆ ಪ್ರಾಮಾಣಿಕತೆ ಗರಿಗೆದರುತ್ತದೆ ಸ್ವಾರ್ಥವಿಲ್ಲದ ಆತ್ಮಜ್ಞಾನಿಯಾಗುತ್ತಾನೆ ಒಂದು ಪ್ರಚಂಡ ಶಕ್ತಿ

ಯಾಗುತ್ತಾನೆ ಅಂದ ಶಕ್ತಿ ಬಂದಾಗ ಅವರ ಮಾತು ವರ-- ಶಾಪಗಳೆರಡೂ ಆಗಬಲ್ಲವು. ಶರೀಫರು ಅಂಥ ಶಕ್ತಿ ಪಡೆದ ಮಹಾನುಭಾವರಾದರು ಅವರ ಶಾಪಾನುಗ್ರಹದಿಂದ ನೂರಾರು ಮನೆಗಳು ಬಿದ್ದಿದ್ದವು. ಅವರ ಕೃಪೆಗೆ ಒಳಗಾದವರು ಇಹದಲ್ಲಿ ಸುಖ ಪಡುವುದಲ್ಲದೆ ಪರದಲ್ಲಿ ಶಾಂತಿಯನ್ನು ಪಡೆದರು ಶಾಪಕ್ಕೆ ತುತ್ತಾದವರು ಭ್ರಷ್ಟರಾದರು, ಹಾಳಾಗಿ ಹೋದರು ಆದರೆ ಶರೀಫರು ಮಾತ್ರ ಇವಾವುದನ್ನು ಗಮನಿಸದೆ ತಮ್ಮ ಪ್ರವಾಸ ನಡೆಸಿದರು ತಮ್ಮ ಅನುಭವಾಮೃತವನ್ನು ಕೇಳಿದವರಿಗೆಲ್ಲ ನೀಡಿದರು "ಅಲ್ಲೀಕೇರಿಗೆ ಹೋಗೋಣ ಬರ್ತಿರೇನ್ರೇ, ಒಲ್ಲದಿದ್ದರೆ ಇಲ್ಲೇ ಇರ್ತಿರೇನ್ರೇ" ಎಂದು ಜನತೆಯನ್ನು ದೇವಯಾತ್ರೆಗೆ ಕರೆದರು ಸಂಸಾರ ಅಶಾಶ್ವತವಾದರೂ ಅದು ಅಸಾರವಲ್ಲ ಸಂಸಾರವು ಹೋರಾಟದ ಕಣ ಈ ಕಣವಲ್ಲಿ ಹೋರಾಡಲೇಬೇಕು ಜೀವನದಿಂದ ವಿಮುಖರಾಗಿ ನಾವು ದೂರ ಓಡಬೇಕಾಗಿಲ್ಲ ಅದನ್ನು ಅಲ್ಲಗಳೆಯಬೇಕಿಲ್ಲ ಸಂಸಾರವು ಸದ್ಗತಿಗೊಂದು ಸೋಪಾನವೆಂದು ಶರೀಫರು ಸಾರಿದರು "ಜೀವನ ಹುಟ್ಟಿಸಿದ ಉಲ್ಲಾಸದಲ್ಲಿ ಮಹಾದೇವನನ್ನ ಮರೆಯಬೇಡಿರಿ" ಎಂದು ಎಚ್ಚರಿಸಿದರು 'ವಡಿ ಗಾರಗಿ ಹೂರಣಗಡಬು ಕಡಲಿ ಪಚ್ಚಡಿ ಕಟ್ಟೀ ನಾಮ್ರು, ಚಟಕಿ, ಮುಚ್ಚಳ ಗಡಗಿ ಬಾನದ ಹಡಗಿ ಜ್ಞಾಕಿ' ಎಂದು ಮಾರ್ಗದೋರಿದರು ಶಿವನ ಸಂದೇಶವನ್ನು ಊರೂರು, ಓಣಿ ಓಣಿಗಳಲ್ಲಿ ಸಾರುತ್ತ, ತೂರುತ್ತ ಶರೀಫರು ನಡೆದರು "ಪಾಸೂರು ತಿರುಗಿದರು ಬೀಸೋದು ಬಿಡದವ್ವ, ಬೀಸೋಣ ಬರ್ರೆಪ್ಪ ಹಾಡ್ಯಾಡಿ" ಎಂದು ಜನತೆಯನ್ನು ಕರೆದು ಅವರಲ್ಲಿ ಭಕ್ತಿಯ ಬೀಜ ಬಿತ್ತಿದರು "ದೇಹವೇ ದೇಗುಲ; ಇದರಲ್ಲಿ ಪ್ರಭು ಕಡು ದೆಡಗಿನಿಂದ ಅಡಗಿ ಕುಳಿತಾನ' ಎಂದು ತೋರಿದರು 'ಆಶೆ ಅಳಿದು ಬಿಡು, ನೀನೇ ಈಶನಾಗುತ್ತೀ' ಎಂದು ಸಾರಿದರು ಮಲಗಿದವರನ್ನು ಎಬ್ಬಿಸುತ್ತ ಶಿವ ಸಂದೇಶವನ್ನು ಮನೆ ಮನೆಗೂ, ಮನಮನಕ್ಕೂ ಮುಟ್ಟಿಸುವ ದೇವಲೋಕದ ದೇವದೂತನೇ, ಆಗಿ ಶರೀಫರು ಶ್ರಮಪಟ್ಟರು "ಹೋಗುತಿಹುದು ನಮ್ಮ ಕಾಯ ವ್ಯರ್ಥ ಇದರ ಮಹತಿಯನ್ನು ತಿಳಿದುಕೊಂಡವನು ಸಹಜ ಯೋಗಿಯಾಗುವನು ನಿನ್ನನ್ನ ನೀನು ತಿಳಿದುಕೋ" ಎಂದು ಅರುಹಿನ ಹಾದಿ ತೋರಿಸಿದರು ಶಿವಸಂದೇಶವನ್ನು ಪುಕ್ಕಟೆಯಾಗಿ ತೂರುತ್ತ ನಡೆದ ಶರೀಫರನ್ನು ಜನರು ಗುರುತಿಸಲಿಲ್ಲ, ಗೌರವಿಸಲಿಲ್ಲ ಆದರೂ ಶರೀಫರು ತಮ್ಮ ಕಾಯಕ ಬಿಡಲಿಲ್ಲ ಡೊಂಕು ಬಾಲದ ಈ ಸಮಾಜ ತಿದ್ದುವ ಕಾರ್ಯವನ್ನು ನಿಲ್ಲಿಸಲಿಲ್ಲ

ವರಕವಿ, ಆತ್ಮಜ್ಞಾನಿ, ಮೋಹ ಮಾಯಗಳ ಆಳಿತ್ತರವನ್ನು ಅಳಿದು ತೂಕ ಮಾಡಿದ ಶರೀಫರ ಲೌಕಿಕ ಬದುಕು ಸುಖವಾಗಿರಲಿಲ್ಲ ಬಡತನ ಅವರ ಬೆನ್ನು ಬಿಡದೆ ಕಾಡಿತು ಶರೀಫರು ತಮ್ಮ ಬಳಿಯಿದ್ದದ್ದನ್ನು ಬೇಡಿದವರಿಗೆಲ್ಲ ದಾನ ಮಾಡುತ್ತಿದ್ದರು ಆದರೆ ಅವರಿಗೆ ಅಂಬಲಿಗೆ ಗತಿಯಿಲ್ಲದಾಗ ಯಾರೂ ಅವರಿಗೆ ಅನ್ನ ನೀಡದಿರುವುದು ನಮ್ಮ ಸಮಾಜದ ವಕ್ರ ಬುದ್ಧಿಗೊಂದು ಸಾಕ್ಷಿಯಾಗಿದೆ

ಬದುಕಿನ ನಿತ್ಯಾನಿತ್ಯತೆಗಳನ್ನು ಶರೀಫರು ಅರುಹಿನ ಸಾಣೆಗೆಯಲ್ಲಿ ಸೋಸಿದರು ಗಟ್ಟಿಗಾಳನ್ನು ಹುಡುಕಿದ ಅವರು ಸಂಸಾರಿಯ ಜಡ ಜೀವವನ್ನು ಎಚ್ಚರಿಸಿದರು 'ಅಸದೃಶವಾದ ವಾಕ್ ಶಕ್ತಿ ಪಡೆದ ಶರೀಫರು ಕಂಡದ್ದನ್ನು ನಿರ್ಭೀತಿಯಿಂದ ಹೇಳಿದರು ತಪ್ಪಿದ್ದಲ್ಲಿ ತಿದ್ದಿದರು ತಿದ್ದಲಾರದ್ದನ್ನು ಒದ್ದರು ಬುದ್ದಿ ಬರದವರನ್ನು ಖಂಡಿಸಿದರು ತಮ್ಮನ್ನು ಖಂಡಿಸಿದವರನ್ನು ಹರಸಿದರು ತಮಗೆ ಹರಕೆ ನೀಡುವ ನೆಪದಲ್ಲಿ ತಮ್ಮಿಂದ ಉಪಕೃತರಾಗಲು ಬಂದವರ ಬಗ್ಗೆ ಸಿಡುಕಿದರು ಶರೀಫರು ಏನೇ ಮಾಡಲಿ ಅದೊಂದು ಪವಾಡವಾಗುತ್ತಿತ್ತು ಆ ಪವಾಡಗಳಿಗೆ ಲೌಕಿಕ, ತಾತ್ವಿಕ ಅರ್ಥ, ಪಾರಮಾರ್ಥಿಕ ಹಿನ್ನಲೆ, ನೈತಿಕ ಪಾಠ ಇದ್ದೇ ಇರುತ್ತಿದ್ದವು. ವೇದಾಂತಿಗಳಂತೆ, ಪ್ರವಚನಕಾರರಂತೆ

ಅವರು ಬಾಯಿಬಿಟ್ಟು ಎಲ್ಲಿಯೂ ದೇವರ ಕುರಿತಾಗಿ ಬಹಿರಂಗವಾಗಿ ಚರ್ಚಿಸಲಿಲ್ಲ ಇತರರಂತೆ ಜೀವಜಗತ್ತು, ಬ್ರಹ್ಮ ಇಹಲೋಕ ಪರಲೋಕಗಳ ಬಗೆಗೆ ಗಂಟೆಗಟ್ಟಲೆ ಭಾಷಣಮಾಡಿ, ಬಾಯಿ ತಿಂಡಿ ತೀರಿಸಿಕೊಳ್ಳಲಿಲ್ಲ ಅವರಿಗೆ ಏನೆಲ್ಲ ಹೇಳಬೇಕಾಗಿತ್ತೋ ಅದನ್ನೆಲ್ಲ ಸೂಚ್ಯವಾಗಿ ತತ್ವಪದಗಳ ಮೂಲಕ ಹದವರಿತು ಬಿತ್ತರಿಸಿದರು

ಶರೀಫರಿಗೆ ಮಹಾಜ್ಞಾನ ದೊರೆತ ಪ್ರಸಂಗ ಅತ್ಯಂತ ಮಾರ್ಮಿಕವಾದುದು ಗುರುಗಳಾದ ಗೋವಿಂದ ಭಟ್ಟರ ಅಂತ್ಯಕಾಲ ಶರೀಫರ ಬರುವಿಗಾಗಿ ಕಾದ ಗುರುಗಳು ಆತ ಬರುತ್ತಿದ್ದಂತೆಯೇ "ಶರೀಫ, ಬಂದೆಯಾ ಮಗೂ, ನಾವು ಈ ಮನೆಯನ್ನು ಖಾಲೀ ಮಾಡುತ್ತೇವೆ' ಎಂದಾಗ ಶರೀಫರ ಜೀವ ತಳಮಳಿಸಿತು 'ನಾನೂ ನಿನ್ನೊಡನೆ ಬರುತ್ತೇನೆ ತಂದೆ' ಎಂದು ಮಗುವಿನಂತೆ ಅತ್ತರು ಆಗ ಗೋವಿಂದ ಭಟ್ಟರು ಅವನನ್ನು ಅಪ್ಪಿಕೊಂಡು "ಶರೀಫಾ, ನಾನು ನಿನ್ನನ್ನು ಬಿಟ್ಟು ಎಲ್ಲಿಯೂ ಹೋಗುವುದಿಲ್ಲ ನಾನೇ, ನೀನಾಗಿ, ನಿನ್ನೊಳಗೆ ಸದಾಕಾಲ ಇರುತ್ತೇನೆ ಬಾಳಾ' ನಾನು ವೃಕ್ಷ ನೀನು ಆ ವೃಕ್ಷದಫಲ" ಎಂದೆಲ್ಲ ತಿಳಿಹೇಳಿ ಶರೀಫ, ಈ ಮನೆಯ ಕೀಲಿ ಕೈ ಕೊಡುತ್ತೇನೆ ಬಾ ಮಗೂ ಎಂದು ಕರೆದು ಅವನ ಕಣ್ಣಲ್ಲಿ ತಮ್ಮ ದೃಷ್ಟಿಯಿಡುತ್ತಿದ್ದಂತೆ ಅವರ ಶಕ್ತಿಯೆಲ್ಲ ತೇಜಸ್ಸಿನ ರೂಪದಲ್ಲಿ ಶರೀಫರ ಕಣ್ಣ ಸೇರಿ ಹೃದಯದಲೆಲ್ಲ ಹರಡಾಡಿತು ನಿಂತಾವರಿಗೆಲ್ಲ ಇದೊಂದು ಅದ್ಭುತ ದೃಶ್ಯವಾಗಿತ್ತು

"ದೊರಕಿದಾ ಗುರು ದೊರಕಿದಾ
ಪರಮಾನಂದ ದೊರೆವದರಿವಿನೊಳಗೆ ಬಂದು"

ಎಂದು ಶರೀಫರು ಹಾಡಿದರು ನಂತರ, ಗೋವಿಂದಭಟ್ಟರು ಬಹಳ ದಿನ ಬದುಕಲಿಲ್ಲ ಅವರ ಇಹದ ಕೆಲಸ ಮುಗಿದಿತ್ತು. ಅವರು ದೇಹಬಿಟ್ಟಾಗ ಶರೀಫರ ಬಾವಗಡಲು ಮೊರೆಯಿಟ್ಟಿತು 'ಹಡಗ ಮುಳಗಿತೋ' ಎಂದು ಕವಿವಾಣಿ ಹಾಡಿತು ಗುಳೇವು ಕಟ್ಟಿಕೊಂಡು ಗುರುನಾಥ ಹೊರಟ ಎಂದು ಭಾಷ್ಪಾಂಜಲಿ ನೀಡಿದರು

'ಕಿಂಕರನ ಅವಗುಣಗಳ ನೋಡದೆ,
ಅವನನ್ನು ಎತ್ತಿ ಹಿಡಿದ ಶಂಕರನೇ'

ಎಂದು ಅವರ ಕಾಲುಗಳ ಬಳಿ ಹೊರಳಾಡಿದರು

ಗುರುಗಳ ಕಾಲವಾದ ನಂತರವೂ ಶರೀಫರು ಇಪ್ಪತ್ತು ವರ್ಷಗಳ ಕಾಲ ಬದುಕಿದ್ದರು ಗುರುಗಳ ಕೃಪೆಯಿಂದಾಗಿ ಶರೀಫರ ವರಕವಿತ್ವಕ್ಕೆ ವಜ್ರ ಸಾಣೆ ಹಿಡಿದಂತಾಯಿತು ಪ್ರತಿ -- ಸನ್ನಿವೇಶವೂ ಅವರ ಭಾವಗಡಲನ್ನು ಉಕ್ಕೇರಿಸಿತು ಸಾವಿರಾರು ತತ್ವಪದಗಳನ್ನು ಹಾಡಿದರು ರಿವಾಯಿತಗಳನ್ನು ಹೇಳಿದರು ನಿಂತ ನಿಂತಲ್ಲೇ ಆರತಿ ಪದಗಳನ್ನು ಬರೆದು ಕೊಟ್ಟರು ನೂರಾರು ಲೀಲೆಗಳನ್ನು ಮಾಡಿ ತೋರಿಸಿದರು ಹಿಂದೂ ಮಹಮ್ಮದಿಯರಲ್ಲಿಯ ಭೇದ -- ಭಾವ ಅಳಿಸಿ ಹಾಕಿದರು "ಅಲ್ಲಾ ಅಲ್ಲಮ ರಾಮ ರಹೀಮರೆಲ್ಲಾ ಒಂದೇ" ಎಂದು ಹಾಡಿದರು ಮಹಮ್ಮದೀಯ ಮನೆತನದಲ್ಲಿ ಮೂಡಿ, ಬ್ರಾಹ್ಮಣ ಗುರುವಿನಡಿಯಲ್ಲಿ ಬೆಳಕು ಕಂಡು ವೀರಶೈವ ಶರಣರ ಸಂಗದಲ್ಲಿ ಲೋಲಾಡಿ ಅವರು ಐಕ್ಯಮತ್ಯವನ್ನು ಮೆರೆದರು ಅಲ್ಲಾನ ಅಕ್ಕರೆಯ ಮಗುವಾದ ಅವರು---

'ಮೈಜಂಗಮ ಹೋಕರ ಗಲಿಗಲಿ ಫಿರ್ಯಾ
ಅಂಗಮೇ ಲಿಂಗ ಜಂಗ ಪಾವಮೇ
ಸಂಗ ಶರಣಕೋ ಮೈ ದೋಲಿಯಾ'

ಎಂದು ಹಾಡಿದರಲ್ಲದೆ---

'ಇಂದು ಏಕಾದಶಿಯ ವ್ರತ ತೀರಿಸಿದೆ
ತಂದೆ ಗುರುಗೋವಿಂದಲಿಂತನಾಜ್ಞೆಯಲಿ'

ಎಂದೂ ಹೇಳಿದರು ಎಲ್ಲವನ್ನು ಹೀರಿ, ತನ್ನದಾಗಿಸಿಕೊಂಡು, ಎಲ್ಲವನ್ನು ಮೀರಿ, ಮನುಷ್ಯ ಏರಹುದಾದ ಎತ್ತರವನ್ನು ಶರೀಫರು ಏರಿದರು ಜನ ಜೀವನ ಹಸನವಾಗಲಿ, ಹೂವಾಗಲಿ ಜೇನಾಗಲಿ ಎಂದು ಬಯಸಿ, ದಣಿವರಿಯದಂತೆ ಹಾಡಿದರು, ಹಾಡಿ ಹಣ್ಣಾದರು

ಶರೀಫರ ಲೌಕಿಕ ಬಾಳಿನಲ್ಲೂ ಸಂಜೆಯಾಯಿತು "ಸಂಜೆಯಾಗುತ್ತಿದೆ, ಮನೆಯೊಳಗೆ ದೀಪ ಹಚ್ಚಿರಪ್ಪಾ" ಎಂದು ಹಾಡುತ್ತ ಎಲ್ಲರ ಶಿಷ್ಯರ ಮನೆಗೆ ಹೋದರು ಅವರೆಲ್ಲ ತಮ್ಮ ತಮ್ಮ ಮನೆಗಳಲ್ಲಿ ದೀಪ ಹಚ್ಚುವುದನ್ನು ಕಂಡು ಶರೀಫರು ನಗುತ್ತ, "ನೀವೆಲ್ಲ ಮಣ್ಣ ಮನೆಯಲ್ಲಿ ಎಣ್ಣೀ ದೀಪ ಹಚ್ಚಿದಿರಿ ಈ ಮರೆವಿನ ಮನೆಯಲ್ಲಿ ಅರುಹಿನ ದೀಪ ಹಚ್ಚಿಕೊಳ್ಳಲಿಲ್ಲವಲ್ಲ" ಎಂದು ನುಡಿದರು ಎಲ್ಲರನ್ನು ಕರೆದು ತಮ್ಮ ಏಕತಾರಿ ಹಿಡಿದು ಸುಶ್ರಾವ್ಯವಾಗಿ 'ಬಿಡತೀನಿ ದೇಹ ಬಿಡತೀನಿ' ಎಂದು ಹಾಡಿದರು ಅದನ್ನು ಕೇಳಿದ ಜನ ಅಳುತ್ತ, "ಅಜ್ಜಾ ನನಗ ಸುಖಾಕೊಡು, ನನಗ ಮನಿಕೊಡು, ಹೊಲಾ ಕೊಡು" ಎಂದು ಕೇಳತೊಡಗಿದರು ಆಗ ಶರೀಫರು "ನಿಮ್ಮಲ್ಲಿರುವುದನ್ನು ನನಗೆ ಕೊಟ್ಟರೆ ನಾನು ನೀವು ಬೇಡಿದ್ದನ್ನು ಕೊಡುತ್ತೇನೆ" ಎಂದರು ಅವರಲ್ಲ ಈ ಶರೀಫ ತಮ್ಮ ತನುಮನಧನಗಳನ್ನೆಲ್ಲ ಕೇಳುತ್ತಾನೆಂದು ಹೆದರಿ ಹಿಂದೆ ಸರಿದರು ಕೆಲವರು ಕೊಡಲು ತಮ್ಮಬಳಿ ಏನೂ ಇಲ್ಲವೆಂದರು ಆಗ ಶರೀಫರು "ನಿಮ್ಮ ಹತ್ತಿರ ನಿಮ್ಮ ಜನ್ಮಾಂತರದ ಕರ್ಮದಗಂಟು ಇದೆಯಲ್ಲಾ, ಅದನ್ನೇ ಕೊಡಿ, ನಾನು ಅದನ್ನೊಯ್ದು ಗೋವಿಂದಜ್ಜನ ಪಾದಕ್ಕೆ ಹಾಕುತ್ತೇನೆ ನಿಮ್ಮಕರ್ಮದ ಬಂಧ ಕಳೆಯುತ್ತೇನೆ" ಎಂದು ಹೇಳಿ "ನಾನು ಸತ್ತ ಮೇಲೆ ಈ ತೊಗಲಿಗಾಗಿ ಕಚ್ಚಾಡದಿರಿ ತತ್ವಕ್ಕಾಗಿ ಹೋರಾಡಿರಿ ಸತ್ತವ ನರಿಯಿರಿ ನನ್ನ ತಂದೆ -- ತಾಯಿಗಳ ಪಕ್ಕಾದಲ್ಲಿ ಮಲಗಿಸಿರಿ" ಎಂದು ಹೇಳಿದರು "ದೇಹ ಬಿಡತೀನಿ ಅವನಿಯೊಳು ಶಿಶುನಾಳದೀಶನೇ ಗತಿಯೆಂದು" ಎಂದು ಹಾಡುತ್ತ ಶರೀಫರು ಸಾಯುಜ್ಯ ಪದವಿಯನ್ನು ಪಡೆದರು

ವರಕವಿಗಳಾದ ಶರೀಫರು ಪವಾಡ ಪುರುಷರು ಆತ್ಮಜ್ಞಾನಿಗಳು, ಮಾನವ ಪ್ರೇಮಿಗಳು, ಶಿಕ್ಷಣ ಸ್ನೇಹಿಗಳು ಆಗಿದ್ದರು ಬಾಳಿನ ಅಪಾರ ವಸ್ತುಗಳಿಗೆ ಅಚ್ಚಳಿಯದ ಆತ್ಮಜ್ಞಾನದ ಅಮರವಾದ ಬಣ್ಣ ಬಳಿದರು ಸಾಮಾನ್ಯವಾದುದಕ್ಕೆ ಅಸಾಮಾನ್ಯತೆಯ ಪಟ್ಟ ಕಟ್ಟಿದ ಅಮರಕವಿ ಆಡುಭಾಷೆಯನ್ನು ಸಾಹಿತ್ಯ ಸಿಂಹಾಸನಕ್ಕೇರಿಸಿದ ಜಾನಪದ ಕವಿಯಾತ ಅವರು ಹಾಡಿದ 'ಬಿದ್ದಿಯಲೇ ಮುದುಕಿ, ಅಳಬ್ಯಾಡ ತಂಗಿ ಅಳಬ್ಯಾಡ, ಹೋಗುತಿಹುದು ಕಾಯ ವ್ಯರ್ಥ, ಹುಟ್ಟಿದ್ದು ಹೊಲೆ ಮನಿ, ಸೋರುತಿಹುದು ಮನೆಯ ಮಾಳಿಗೆ, ನಡಿಯೋ ದೇವರ ಚಾಕರಿಗೆ, ಅಲ್ಲೀಕೇರಿಗೆ ಹೋಗೂಣು ಬರ್ತಿರೇನ್ರಿ" ಎಂಬಂಥ ಸಾವಿರಾರು ಪದಗಳು ಬಂಗಾರದ ಗಟ್ಟಿಗಳು ಇಂಥ ಶರೀಫ ಸಾಹೇಬರು ಕರ್ನಾಟಕದವರೆಂಬುದೊಂದು ಹೆಮ್ಮೆಯ ಸಂಗತಿ ಅವರ ಆಶೀರ್ವಾದ ದೊರೆತರ ಅದೊಂದು ಭಾಗ್ಯ ಅಂಥ ಭಾಗ್ಯ ನಮ್ಮದೆಲ್ಲ ಆಗಲಿ ಎಂದು ಆಶಿಸೋಣವೇ?



# ವಾರ್ತಾಲಹರಿ

## ಕೃಷ್ಣಾ ಪುಷ್ಕರಗಳು

ಹನ್ನೆರಡು ವರ್ಷಕ್ಕೆ ಒಮ್ಮೆ ಗುರುವು ಕನ್ಯಾರಾಶಿಯಲ್ಲಿ ಪ್ರವೇಶಿಸಿದಾಗ ಆ ಪ್ರವೇಶದ ಮೊದಲ ಹನ್ನೆರಡು ದಿನಗಳಕಾಲ ನಡೆಯುವ ಕೃಷ್ಣಾ ಪುಷ್ಕರಗಳು ಈ ಬಾರಿ ಸೆಪ್ಟಂಬರ್ 11 ರಿಂದ ಸೆಪ್ಟಂಬರ್ 22 ರವರೆಗೆ ನಡೆದು ಯಶಸ್ವಿಯಾದವು. ಕೋಟಿ ಮಂದಿಗೂ ಮಿಗಿಲಾಗಿ ಕೃಷ್ಣಾನದಿಯಲ್ಲಿ ಸ್ನಾನಮಾಡಿ ಪುನೀತರಾದರು

ಆಂಧ್ರಪ್ರದೇಶದ ಮಹಬೂಬ್‌ನಗರ್, ಕರ್ನೂಲು, ನಲ್ಗೊಂಡ, ಗುಂಟೂರು, ಕೃಷ್ಣಾ ಜಿಲ್ಲೆಗಳಲ್ಲಿ ಹರಿದು ಸಮುದ್ರವನ್ನು ಸೇರುವ ಕೃಷ್ಣವೇಣೀ ನದಿಗೆ ಹನ್ನೆರಡು ವರ್ಷಕ್ಕೆ ಒಮ್ಮೆ ನಡೆಯುವ ಪುಷ್ಕರಗಳಿಗಾಗಿ ಒಂದು ವರ್ಷಕ್ಕೂ ಮೊದಲಿನಿಂದಲೇ ಹೆಚ್ಚಿನ ಜನಸಂಖ್ಯೆಯನ್ನು ಬರಮಾಡಿಕೊಳ್ಳಲು ಏರ್ಪಾಡುಗಳು ನಡೆದಿದ್ದವು. ಕರ್ನೂಲಿನಲ್ಲಿ ಒಂದು, ನಲ್ಗೊಂಡ ಮಹಬೂಬ್ ನಗರಗಳಲ್ಲಿ ತಲಾ ಐದು, ಗುಂಟೂರು ಜಿಲ್ಲೆಯಲ್ಲಿ ಇಪ್ಪತ್ತೂರು, ಕೃಷ್ಣಾ ಜಿಲ್ಲೆಯಲ್ಲಿ ಒಟ್ಟು ಮುವತ್ತಒಂಭತ್ತು ಸ್ನಾನಘಟ್ಟಗಳ ಏರ್ಪಾಡಾಗಿದ್ದವು. ವಿಜಯವಾಡ ನಗರದಲ್ಲಿ ಮಾತ್ರವೇ ಇಪ್ಪತ್ತೂರು ಸ್ನಾನಘಟ್ಟಗಳು ಏರ್ಪಾಡಾಗಿದ್ದು 1980 ರಲ್ಲಿನಂತೆ ಈ ಬಾರಿ ಪುಷ್ಕರವರ್ಷ ಸರಿಯಾಗಿ ಆಗದೆ ಇದ್ದರೂ, ಶ್ರೀಶೈಲಂ, ನಾಗಾರ್ಜುನಸಾಗರಗಳಲ್ಲಿನಿಂದ ಹೆಚ್ಚುವರಿ ನೀರನ್ನು ಬಿಡುಗಡೆ ಮಾಡಿದ್ದು, ಪುಷ್ಕರ ಯಾತ್ರಿಕರ ಸ್ನಾನ ಕರ್ಮಗಳು ಸುಸೂತ್ರವಾಗಿ ಸಾಗುವಂತೆ ಮಾಡಲಾಯಿತು ಪುಷ್ಕರಗಳಿಗಾಗಿಯೇ ಪ್ರತ್ಯೇಕಾಧಿಕಾರಿಯಾಗಿ ಶ್ರೀ ಉಮಾಮಹೇಶ್ವರ ರಾವ್ ಅವರು ಪೋಲೀಸು, ನಗರಸಭಾಧಿಕಾರಿಗಳು, ನೀರಾವರೀ ಇಲಾಖೆ, ಆರೋಗ್ಯ ಇಲಾಖೆ, ಸಾರ್ವಜನಿಕ ವಾಹನ ಇಲಾಖೆಗಳ ಯಶಸ್ವಿ ದೆಂಬಲದಿಂದ ಪುಷ್ಕರಗಳಿಗಾಗಿ ಬೇರೆ ಬೇರೆ ಊರುಗಳಲ್ಲಿನ ಏರ್ಪಾಡುಗಳನ್ನು ಪರ್ಯವೇಕ್ಷಿಸಿ, ಉಸ್ತುವಾರಿಯನ್ನು ನೋಡಿಕೊಂಡು ಶಾಂತಿಭದ್ರತೆ, ನೈರ್ಮಲ್ಯ ಬಂದು ಹೋಗುವಿಕೆಗಳು ಯಶಸ್ವಿಯಾಗಿರುವಂತೆ ನೋಡಿಕೊಂಡರು

ಗೋದಾವರೀ ಪುಷ್ಕರಗಳಲ್ಲಿ ನಂತೆಯೇ ಕೃಷ್ಣಾ ಪುಷ್ಕರಗಳಲ್ಲಿಯೂ ತಿ ತಿ ದೇವಸ್ಥಾನಗಳು ಹಿರಿಯ ಮಟ್ಟದಲ್ಲಿ ಪಾಲುಗೊಂಡಿದ್ದಿತು ಕೃಷ್ಣಾ ಪುಷ್ಕರಗಳ ವಿಶೇಷಾದಿಕಾರಿಯಾಗಿ ತಿ ತಿ ದೇ ಗಳ ವಿಶೇಷ ದರ್ಜೆಯ ಡೆ ಇ ವೊ ಶ್ರೀ ವಾಸುದೇವನಾಯುಡು ಅವರು ನೇಮಕವಾಗಿ, ತಿ ತಿ ದೇ ಗಳ ವಿವಿದ ಇಲಾಖೆಗಳ ಸಿಬ್ಬಂದಿಯ ನೆರವಿನಿಂದ ಯಶಸ್ವಿಯಾಗಿ ತಿ ತಿ ದೇ ಕಾರ್ಯಕ್ರಮಗಳನ್ನು ನಡೆಸಿಕೊಟ್ಟರು

ಕೃಷ್ಣಾತೀರದ ವಿಜಯವಾಡದಲ್ಲಿನ ಬಂದರ್ ರಸ್ತೆಯಲ್ಲಿನ ಪಿ ಡಬ್ಲ್ಯೂ ಡಿ ಮೈದಾನದಲ್ಲಿ ಪುಷ್ಕರಗಳಿಗಾಗಿ ವಸ್ತು ಪ್ರದರ್ಶನ ಶಾಲೆ ನಡೆಯಿತು ಅದರ ಪಕ್ಕದಲ್ಲಿಯೇ ತಿರುಮಲೆ -- ತಿರುಪತಿ ದೇವಾಲಯದ ಕಾರ್ಯಕ್ರಮಗಳು ನಡೆದವು. ತಿರುಮಲೆಯ ಶ್ರೀ ವೆಂಕಟೇಶ್ವರಸ್ವಾಮಿಯ ಆಲಯ ಪ್ರತಿರೂಪವನ್ನು ಇಲ್ಲಿ ತಾತ್ಕಾಲಿಕವಾಗಿ ಏರ್ಪಡಿಸಲಾಗಿದ್ದು ಅಪಾರ ಜನವನ್ನು ಆಕರ್ಷಿಸಿತು ಇಲ್ಲಿಯೇ ವಿಶಾಲವಾದ ಪ್ರಾಂಗಣದ ಏರ್ಪಾಡಾಗಿ ದಿನವೂ ಬೆಳಗ್ಗೆ 5--30 ರಿಂದ ರಾತ್ರಿ 11 ರವರೆಗೆ ಧಾರ್ಮಿಕ ಕಾರ್ಯಕ್ರಮಗಳು ತಿ ತಿ ದೇ ಧರ್ಮಪ್ರಚಾರ ಪರಿಷತ್ ವತಿಯಿಂದ ನಡೆದವು. ಜೊತೆಗೇ ವಿಶಾಲವಾದ ಪುಸ್ತಕ ಪ್ರದರ್ಶನ ವಿಕ್ರಯಶಾಲೆಗಳೂ ಏರ್ಪಾಡಾಗಿದ್ದವು. ಇಲ್ಲಿ ತಿ ತಿ ದೇ ಗ್ರಂದ ಪ್ರಕಟನ ವಿಭಾಗವೇ ಅಲ್ಲದೆ, ಶ್ರೀರಾಮಕೃಷ್ಣ ಮಿಷನ್, ಶ್ರೀ ಪುಷ್ಪಗಿರಿ ಪೀಠ, ಶ್ರೀ ವಿಶ್ವಹಿಂದೂ ಪರಿಷತ್, ಶ್ರೀ ಸುಂದರ ಚೈತನ್ಯಾಶ್ರಮ, ಶ್ರೀ ಗಣಪತಿ ಸಚ್ಚಿದಾನಂದಾಶ್ರಮ, ಮೊದಲಾದ ಪ್ರಕಟನ ಮಾರಾಟ ಮಳಿಗೆಗಳೂ ಏರ್ಪಾಡಾಗಿದ್ದವು. ತಿ ತಿ ದೇ ಗಳ ವೈಷ್ಣವ ದೇವಾಲಯ ವಸ್ತು ಪ್ರದರ್ಶನ ಶಾಲೆ, ದಾಸಸಾಹಿತ್ಯ ದರ್ಶಿನಿ, ಮೊದಲಾದವು ಭಕ್ತರನ್ನು ಆಕರ್ಷಿಸಿದ್ದೇ ಅಲ್ಲದೆ, ತಿ ತಿ ದೇ ಆಯುರ್ವೇದ ವೈದ್ಯಶಾಲೆಯೂ ಏರ್ಪಾಡಾಗಿದ್ದು ಔಷದಗಳನ್ನು ಉಚಿತವಾಗಿ ನೀಡಲಾಯಿತು "ಗೃಹ ವೈದ್ಯಮು" ತೆಲುಗು ಪುಸ್ತಕ ಇಲ್ಲಿ ಜನಪ್ರಿಯವಾಯಿತು ಜೊತೆಗೇ ಈ ಅಂಗಳದಲ್ಲಿ ಗಾಯತ್ರಿ ಜಪಯಜ್ಞ ಈಶ್ವರೀಯ ಬ್ರಹ್ಮಕುಮಾರಿ ವಿಶ್ವವಿದ್ಯಾಲಯದ ವಸ್ತು ಪ್ರದರ್ಶನಗಳೂ, ವಾಸ್ತು ಶಿಲ್ಪ ಪ್ರದರ್ಶನವೂ, ಆಂದ್ರಪ್ರದೇಶದ ದೇವಾದಾಯ ಇಲಾಖೆಯ ಮುಖ್ಯ ದೇವಾಲಯಮೂರ್ತಿಮಂದಿರವೂ ಏರ್ಪಾಡಾಗಿದ್ದು, ವಿಜಯವಾಡ ಕನಕದುರ್ಗ, ಅನ್ನವರಂ ಸತ್ಯನಾರಾಯಣ ಸ್ವಾಮಿ, ಸಿಂಹಾಚಲ ನರಸಿಂಹಸ್ವಾಮಿ, ಯಾದಗಿರಿ ಗುಟ್ಟ ನರಸಿಂಹಸ್ವಾಮಿ, ಭದ್ರಾಚಲಂ ಕೋದಂಡ ರಾಮಸ್ವಾಮಿ, ಕಾಳಹಸ್ತೀಶ್ವರಸ್ವಾಮಿ ಮೊದಲಾದ ವಿಗ್ರಹಗಳೂ ಭಕ್ತ ಜನರಿಗೆ ದರ್ಶನ ನೀಡಿ ತತ್ಸಂಬಂದಿ ಸುಪ್ರಭಾತ ಆಲಯ ಚರಿತ್ರೆ, ಪಡಿಪ್ರಸಾದಗಳೂ ಮಾರಾಟವಾದವು. ಇಲ್ಲಿಯೇ ತಿ ತಿ ದೇವಾಲಯದ ಬದಿಯಲ್ಲಿ ದಾರ್ಮಿಕ ಕಾರ್ಯಕ್ರಮಗಳ ವೇದಿಕೆಯ ಎದುರಾಗಿ ಊಂಜಲ್ ಮಂಟಪವನ್ನು ಸಿದ್ಧಪಡಿಸಿ ಶ್ರೀ ವೆಂಕಟೇಶ್ವರಸ್ವಾಮಿ, ಶ್ರೀದೇವಿ ಭೂದೇವಿಯರಿಗೆ ದಿನವೂ ಉಯ್ಯಾಲೆಸೇವೆಯನ್ನು ಸಮರ್ಪಿಸಲಾಯಿತು ಅನ್ನಮಾಚಾರ್ಯ ಪ್ರಾಜೆಕ್ಟ್ ಕಲಾವಿದರು ಸ್ವಾಮಿಯ ಊಂಜಲ್‌ಸೇವೆಯಲ್ಲಿ ಸಂಕೀರ್ತನ ಸೇವೆಯನ್ನು ಸಲ್ಲಿಸಿದರು

ತಿ ತಿ ದೇವಸ್ಥಾನಗಳ ದಾರ್ಮಿಕ ಪ್ರಕಟನ ವಿಭಾಗದವರ ಪುಸ್ತಕ ಪ್ರದರ್ಶನ ಮಾರಾಟ ಮಳಿಗೆಯಲ್ಲಿ ಎಂದೂ ಇಲ್ಲದಂತಹ ಜನಸಂದಣಿಯಿದ್ದಿತೆನ್ನದೇಕು ಮೊದಲೇ ಅತಿಕಡಮೆ ದರಗಳಲ್ಲಿನ ಅಮೂಲ್ಯ ಪುಸ್ತಕಗಳಿಗೆ ವಿಶೇಷ ರಿಯಾಯಿತಿಯನ್ನೂ ನೀಡಿ ಮಾರಾಟ ಮಾಡಲಾಯಿತು ಆರು ರೂಪಾಯಿಗಳಿಗಿಂತ ಕಡಮೆ ಬೆಲೆಯ ಪುಸ್ತಕಗಳಿಗೆ ಇಪ್ಪತ್ತೈದು ಶತಾಂಶ ರಿಯಾಯಿತಿಯೂ ಆರು ಮತ್ತು ಹೆಚ್ಚಿನ ಬೆಲೆಯ ಪುಸ್ತಕಗಳಿಗೆ ಐವತ್ತು ಶತಾಂಶ ರಿಯಾಯಿತಿಯೂ ನೀಡಿ ಮಾರಾಟ ಮಾಡಲಾಯಿತು ಜೊತೆಗೇ ಅನ್ನಮಾಚಾರ್ಯರ ಹಾಡುಗಳ ಧ್ವನಿ ಸುರುಳಿಗಳೂ, ಶ್ರೀ ವೆಂಕಟೇಶ್ವರ ಬ್ರಹ್ಮೋತ್ಸವ, ಹಾಗೂ ಶ್ರೀ ವೆಂಕಟೇಶ್ವರ ವೈಭವಂ ವೀಡಿಯೋ ಕ್ಯಾಸೆಟ್‌ಗಳೂ ಮಾರಾಟವಾದವು. ಡಾ॥ ಆರ್ ಸೂರ್ಯನಾರಾಯಣ ಮೂರ್ತಿಯ ವರ ತಾತ್ಪರ್ಯದ ಶ್ರೀಮದ್ಭಗವದ್ಗೀತ ಸರತಿಯಸಾಲಿನಲ್ಲಿ ನಿಂತುಕೊಳ್ಳುವಂತೆ ಆಗಿದ್ದಿತು ಋಗ್ವೇದ, ಯಜುರ್ವೇದ ಅದರ್ವವೇದಗಳ ಪ್ರತಿಗಳೂ, ಪುಷ್ಕರವೇಣ, ಪುಷ್ಕರ ಮಹಾತ್ಮ್ಯ ಮಹರ್ಷಿಗಳ ಚರಿತ್ರೆ, ರಾಮಾಯಣ, ಭಾರತ, ಭಾಗವತಗಳೂ ವಿಪರೀತ ಜನಪ್ರಿಯವಾಗಿತ್ತವು. 25 ರೂ, 50 ರೂ, 100 ರೂ ಗಳ ಬೆಲೆಯ ಪುಸ್ತಕಗಳ ಸೆಟ್‌ಗಳನ್ನು ಸಹ ಮಾರಾಟ ಮಾಡಲಾಯಿತು ಒಟ್ಟು ಮಾರಾಟದ ಮೊತ್ತ ಆರು ಲಕ್ಷಕ್ಕಿಂತ ಹೆಚ್ಚು

ಇವುಗಳ ಜೊತೆಗೇ ತಿ ತಿ ದೇ ವಿಚಾರಣಾ ಕೇಂದ್ರದಲ್ಲಿ ಶ್ರೀ ವೆಂಕಟೇಶ್ವರ ಸ್ತೋತ್ರ, ಬಗವತ್ಸಂದೇಶ, ಮೊದಲಾದ ಕಿರುಪುಸ್ತಕಗಳನ್ನು ಉಚಿತವಾಗಿ ಹಂಚಲಾಯಿತು

ಶ್ರೀ ವೆಂಕಟೇಶ್ವರ ಸ್ವಾಮಿ ದೇವಾಲಯದಲ್ಲಿ

ದಿನವೂ ಸುಪ್ರಭಾತ ಸೇವೆಯೊಡನೆ ಉಷಃಕಾಲದಲ್ಲಿ ಆರಂಭಗೊಳ್ಳುವ ದರ್ಮದರ್ಶನ ರಾತ್ರಿ ಏಕಾಂತ ಸೇವೆಯವರೆಗೆ ಮುಂದುವರೆದು ವಿಶೇಷ ಜನವನ್ನು ತಿರುಪತಿಯಲ್ಲಿನಂತೆಯೇ ಸರತಿಯ ಸಾಲಿನಲ್ಲಿ ನಡೆದು ಸ್ವಾಮಿದರ್ಶನವನ್ನು ಪಡೆಯುವಂತೆ ಆಕರ್ಷಿಸಿತು ಇಲ್ಲಿ ಹುಂಡಿಯ ಏರ್ಪಾಡೂ ಆಗಿದ್ದು ದಿನವೂ ಬೆಳಗ್ಗೆ ಹುಂಡಿಯ ಕಾಣಿಕೆಗಳನ್ನು ಸಾರ್ವಜನಿಕರ ಅದಿಕಾರಿಗಳ ಸಮಕ್ಷಮದಲ್ಲಿ ಪರಕಾಮಣಿ ಮಾಡಿ ಅಲ್ಲಿಯೇ ಬಂದಿರುತ್ತಿದ್ದ ಬ್ಯಾಂಕಿನವರಿಗೆ ಸ್ವಾಮಿಯ ಹೆಸರಿನಲ್ಲಿ ಜಮಾ ಮಾಡಲಾಗುತ್ತಿದ್ದಿತು ತಿರುಪತಿಯಿಂದ ಸ್ವಾಮಿ ಪ್ರಸಾದವಾದ ಲಾಡು (ದಿನಂಪ್ರತಿ ಹತ್ತರಿಂದ ಹದಿನೈದುಸಾವಿರ ಸಂಖ್ಯೆಯಲ್ಲಿ) ಹಾಗೂ ಕಲ್ಲುಸಕ್ಕರೆಯನ್ನು ತರಿಸಿ ಸಾರ್ವಜನಿಕರಿಗೆ ಮಾರಾಟ ಮಾಡಲಾಗುತ್ತಿದ್ದಿತು

ವಿಜಯವಾಡದಲ್ಲಿ ಹನ್ನೆರಡು ದಿನಗಳ ಕಾಲ ನಡೆದ ಈ ವೆಂಕಟೇಶ್ವರ ಸ್ವಾಮಿ ಪುಷ್ಕರಾಗಮನ ವೈವಿದ್ಯ ಮಯ ವೈಭವವನ್ನು ನೋಡಲು ದಿನವೂ ಸಾವಿರಾರು ಮಂದಿ ಆಗಮಿಸುತ್ತ ಇದ್ದದ್ದು ಕಂಡು ಬಂದಿತು ಆಂದ್ರಪ್ರದೇಶದ ಮಾಜಿ ಮುಖ್ಯಮಂತ್ರಿ ಶ್ರೀ ಎನ್ ಜನಾರ್ದನರೆಡ್ಡಿ, ಮಾರಾಟತೆರಿಗೆ ಇಲಾಖಾ ಮಂತ್ರಿ ಕೆ ಬಾಪಿರಾಜು, ತಿ ತಿ ದೇ ಅದ್ಯಕ್ಷ ಶ್ರೀ ಟಿ ಸುಬ್ಬರಾಮಿರೆಡ್ಡಿ, ತಿ ತಿ ದೇ ಬೋರ್ಡ್ ಸದಸ್ಯರುಗಳು ಬಂದು ಎಲ್ಲವನ್ನೂ ದರ್ಶಿಸಿ ಸೂಕ್ತ ಸಲಹೆಗಳನ್ನು ನೀಡುತ್ತಿದ್ದರು ದಾರ್ಮಿಕ ಕ್ಷೇತ್ರದಲ್ಲಿ ಹೆಸರಾದ ಶ್ರೀ ಶ್ರೀ ಚಿನ್ನಜಿಯರ್ ಸ್ವಾಮಿಗಳು, ಕಂಚಿಯ ಶ್ರೀ ಶ್ರೀ ವಿಜಯೇಂದ್ರಸರಸ್ವತಿಗಳು, ದವಳೇಶ್ವರದ ಶ್ರೀ ಶ್ರೀ ಸುಂದರ ಚೈತನ್ಯ ಸ್ವಾಮಿಗಳು, ಮೈಸೂರಿನ ಶ್ರೀ ಶ್ರೀ ಗಣಪತಿ ಸಚ್ಚಿದಾನಂದ ಸ್ವಾಮಿಗಳು, ವಿಹಿಂಪದ ಕಾರ್ಯದರ್ಶಿ ಶ್ರೀ ಅಶೋಕ ಸಿಂಘಾಲ್ ಮೊದಲಾದ ಹಿರಿಯರೂ ಆಗಮಿಸಿದ್ದರು

ವಿಜಯವಾಡದಲ್ಲಿಯೂ, ಅಮರಾವತಿಯಲ್ಲಿಯೂ ಪ್ರತ್ಯೇಕವಾಗಿ ತಿ ತಿ ದೇ ಧಾರ್ಮಿಕ ಕಾರ್ಯಕ್ರಮಗಳು ಏರ್ಪಾಡಾಗಿದ್ದವು ಬೆಳಗ್ಗೆ 5--30ಕ್ಕೆ ವಿವಿದ ಭಜನಸಂಘಗಳು ನಗರಸಂಕೀರ್ತನೆಯನ್ನು ನಡೆಸಿಕೊಟ್ಟ ಮೇಲೆ ಗೀತಾಪಾರಾಯಣ, ಪುರಾಣ ಪ್ರವಚನ, ದಾರ್ಮಿಕ ಉಪನ್ಯಾಸ, ಸಂಗೀತೆಗಳೂ ಮದ್ಯಾಹ್ನ ದಾರಾವಾಹೀ ಹರಿಕಥೆಗಳೂ, ಮಹಾತ್ಮರ ಸಂದೇಶಗಳೂ, ಸಂಗೀತ ಹರಿಕಥೆ ಕಲಾ ಸಭೆಗಳೂ ನಡೆದವು ಗೀತಾ ಪಾರಾಯಣದಲ್ಲಿ ಸರ್ವಶ್ರೀ ಮುದಿವರ್ತಿ ಕೊಂಡಮಾಚಾರ್ಯ, ಸೋಮುಲ ಅಪ್ಪಾರಾವ್, ಶ್ರೀಮತಿಯರಾದ ರಾಜೇಶ್ವರೀದೇವಿ, ಪದ್ಮಾವತಮ್ಮ ಮೊದಲಾದವರೂ, ಪುರಾಣ ಪ್ರವಚನಗಳಲ್ಲಿ ಸರ್ವಶ್ರೀ ಮಲ್ಲಾದಿ ಚಂದ್ರಶೇಖರ ಶಾಸ್ತ್ರಿ, ಶ್ರೀ ಬಾಪ್ಟಂ ಅಪ್ಪಲಾಚಾರ್ಯುಲು, ಮುದಿಗಂಟಿ ರಂಗಾಚಾರ್ಯುಲು ಮೊದಲಾದವರೂ, ಉಪನ್ಯಾಸಗಳಲ್ಲಿ, ಸರ್ವಶ್ರೀ ಸಮುದ್ರಾಲ ಲಕ್ಷ್ಮಣಯ್ಯ, ಮುದಿಗೊಂಡ ಶಿವಪ್ರಸಾದ್, ಮಾಡುಗುಲ ನಾಗಫಣಶರ್ಮ, ರಾಜನ್ನಕವಿ, ಡಾ ಜಿ ವಿ ಸುಬ್ರಹ್ಮಣ್ಯಂ, ಮುಪ್ಪವೃಷಾದ್ರಿಪತಿ, ಜೂಲಕಂಟಿ ಕೃಷ್ಣಮೂರ್ತಿ, ಜಿ ಮಹತಿ ಶಂಕರ್, ಡಾ ಎನ್, ರಾಮಕೃಷ್ಣಮಾಚಾರ್ಯ ಮೊದಲಾದವರೂ, ಬೆಳಗಿನ ಸಂಗೀತ ಸಭೆಗಳಲ್ಲಿ ಸರ್ವಶ್ರೀ ಎ ಶಾಂಸುಂದರರಾವ್, ಕೆ ಶ್ರೀನಿವಾಸ್, ಜಿ ನಾಗೇಶ್ವರನಾಯುಡು, ಶಬರಿಗಿರೀಶ್, ಧರ್ಮಪುರಿ ರಾಮನಾದನ್, ಟಿ ಪಿ ಚಕ್ರಪಾಣಿ, ಪುದುಕೋಟ್ಟೈ ಕೃಷ್ಣಮೂರ್ತಿ ಪಿ ಎಸ್ ರಂಗನಾದ್, ಶ್ರೀಮತಿಯರಾದ ಎಂ ಶಾರದ, ಮಂಗಳಂಪಲ್ಲಿ ರಾಜೇಶ್ವರಿ, ಸಿ ಪದ್ಮಜ, ವಿ ಲೀಲಾವತಿ, ಪದ್ಮಶ್ರೀ, ಜಿ ಬಾಗ್ಯಲಕ್ಷ್ಮಿ, ಶಾರದಾಕೃಷ್ಣಾಜಿ ಮೊದಲಾದವರು ದಾರಾವಾಹೀ ಹರಿಕಥೆಗಳಲ್ಲಿ -- ಸರ್ವಶ್ರೀ ಪಾಂಡುರಂಗ ಭಾಗವತರ್ (ರಾಮಾಯಣ) ಕೆ ಸಚ್ಚಿದಾನಂದ ಶಾಸ್ತ್ರಿ (ಭಾರತ), ಬಿ ಶಿವರಾಮಕೃಷ್ಣಶಾಸ್ತ್ರಿ (ರಾಮಾಯಣ), ಶ್ರೀಮತಿ ಕೆ ಇಂದಿರಾಬಾಲ (ಬಾರತ) ಅವರು ರಾಮಾಯಣ ಬಾರತಗಳನ್ನು ಸಾದರ ಪಡಿಸಿದರು

ಮಹಾತ್ಮರ ಸಂದೇಶಗಳು ದಿನವೂ ಮದ್ಯಾಹ್ನ 4--30 ರಿಂದ 5--30 ವರೆಗೆ ವಿಜಯವಾಡ ಅಮರಾವತಿಗಳಲ್ಲಿ ನಡೆದವು ಸ್ವಾಮಿನಿಯರಾದ ರಾಜಮಾತ ಬಂಡ್ಲಮಾಂಬ, ವಿಜಯೇಶ್ವರೀ ಮಾತ, ಯೋಗಿನೀಮಾತೆ, ಶೀಲಾಚೈತನ್ಯ ಅವರುಗಳೂ ಮಹರ್ಷಿಗಳಾದ ವಿದ್ಯಾನಂದಗಿರಿ ಸ್ವಾಮಿಗಳು, ಚಿನ್ನ ಜಿಯರು ಸ್ವಾಮಿಗಳು, ಗಣಪತಿ ಸಚ್ಚಿದಾನಂದ ಸ್ವಾಮಿಗಳು, ಸುಂದರ ಚೈತನ್ಯಸ್ವಾಮಿಗಳು, ವಿದ್ಯಾನೃಸಿಂಹ ಭಾರತಿಸ್ವಾಮಿಗಳೂ, ಲಕ್ಷ್ಮಣ ಯತೀಂದ್ರಸ್ವಾಮಿಗಳೂ ಭಕ್ತ ಜನಸಂದೋಹವನ್ನು ತಮ್ಮಅಮೂಲ್ಯ ಸಂದೇಶಗಳೊಡನೆ ಆಶೀರ್ವದಿಸಿದರು

ದಿನವೂ ಈ ಸಂದೇಶಗಳ ನಂತರ ಸಂಗೀತ ಸಭೆಗಳು ನಡೆದವು. ಸರ್ವಶೀ ಟಿ ಎನ್ ಕೃಷ್ಣನ್, ಟಿ ಕೆ ಗೋವಿಂದರಾವ್, ಆರ್ ಕ ಶ್ರೀಕಂಠನ್, ಶೇಕ್ ಚಿನ್ನಮೌಲಾನ, ಲಾಲ್‌ಗುಡಿ ಜಯರಾಮನ್, ಟಿ ವಿ ಶಂಕರನಾರಾಯಣ, ಡಾ ನೂಕಲ ಚಿನ ಸತ್ಯನಾರಾಯಣ, ಡಾ ಚಿಟ್ಟಿಬಾಬು, ಕೆ ನಾಗೇಶ್, ಶ್ರೀಮತಿಯರಾದ ಶ್ರೀರಂಗಂ ಗೋಪಾಲರತ್ನಂ, ರಾದಾವೆಂಕಟಾಚಲಂ, ಶೋಭಾರಾಜು, ಅರುಂಧತಿ ಸರ್ಕಾರ್

ಮೊದಲಾದವರು ತಮ್ಮ ಸಂಗೀತದಿಂದ ಪುಷ್ಕರ ಯಾತ್ರಿಕರನ್ನು ಸಂತಸಗೊಳಿಸಿದರು ನಂತರದ ಹರಿಕಥೆಗಳಲ್ಲಿ ಸರ್ವಶ್ರೀ ವಿ ಜಗನ್ನಾದಭಾಗವತರ್, ವೈ ಸುಬ್ರಹ್ಮಣ್ಯಶಾಸ್ತ್ರಿ, ಬಿ ವೆಂಕಟೇಶ್ವರ್ಲು, ಕೆ ಎಸ್ ನರಸಿಂಹಾಚಾರ್ಯ, ಡಿ ಲಕ್ಷ್ಮೀನಾರಾಯಣ, ಎಸ್, ಷಣ್ಮುಖಭಾಗವತರ್, ಶ್ರೀಮತಿಯಾದ ವಿಮಲಕುಮಾರಿ, ವನಜಕುಮಾರಿ, ಟಿ ವರಲಕ್ಷ್ಮಿ ಪಿ ಸುಂದರಮ್ಮ ಉಮಾಮಹೇಶ್ವರಿ, ಭವಾನಿಭಾಯಿ ಮೊದಲಾದವರು ಹರಿಕಥೆಗಳನ್ನು ನೀಡಿದರು

ದಿನವೂ ರಾತ್ರಿ 9 ರಿಂದ 11 ರವರೆಗೆ ಸಾಂಸ್ಕೃತಿಕ ಕಾರ್ಯಕ್ರಮಗಳು ನಡೆದವು. ಶ್ರೀ ದುರ್ಗಾಪ್ರಸಾದ್ (ಅನ್ನಮಯ್ಯನೃತ್ಯರೂಪಕ) ಶ್ರೀ ವೆಂಪಟಿ ಚಿನಸತ್ಯಂ ( ಶ್ರೀಕೃಷ್ಣ ಪಾರಿಜಾತ) ಶ್ರೀ ವೇದಾಂತಂ ಸತ್ಯನಾರಾಯಣ ಶರ್ಮ (ಕೂಚಿಪುಡಿ), ಶ್ರೀಮತಿ ಶೋಭಾನಾಯುಡು (ಶ್ರೀನಿವಾಸಕಲ್ಯಾಣ) ಶ್ರೀಮತಿ ಮಿತ್ರಾಪ್ರಭು (ನೃತ್ಯ) ಶ್ರೀ ನಟರಾಜರಾಮಕೃಷ್ಣ (ನೃತ್ಯ) ಚೈತನ್ಯ(ಮನುಚರಿತ್ರೆ) ಶ್ರೀಕೃಷ್ಣ ತುಲಾಭಾರ, ದತ್ತಾತ್ರೇಯ ಮಹಾತ್ಮೆ ಮೊದಲಾದ ರೂಪಕಗಳು ಜನವನ್ನು ಆಕರ್ಷಿಸಿದವು.



ಸೆಪ್ಟಂಬರ್ 18 ರ ಶುಕ್ರವಾರ ವಿಜಯವಾಡದಲ್ಲಿ ಬ್ರಹ್ಮಾಂಡವಾದ ವೇದಪಂಡಿತ ಸಭೆಯು ನಡೆಯಿತು ಆರ್ ಸೂರ್ಯ ಪ್ರಕಾಶಶಾಸ್ತ್ರಿ ಅವರ ಅಧ್ಯಕ್ಷತೆಯಲ್ಲಿ ಪುಷ್ಕರಗಳ ವಿಶೇಷಾದಿಕಾರಿ ಶ್ರೀ ಉಮಾಮಹೇಶ್ವರರಾವ್ ಅವರು ಮುಖ್ಯ ಅತಿಥಿಯಾಗಿ ಪಾಲುಗೊಂಡ ವೇದಸದಸ್ಸಿನಲ್ಲಿ ನೂರಕ್ಕೂ ಹೆಚ್ಚು ಮಂದಿ ವೇದಪಂಡಿತರು ಪಾಲುಗೊಂಡು ವೇದ ಪಠನದ ಸೊಬಗನ್ನು ಪ್ರಾಯೋಗಿಕವಾಗಿ ವಿವರಿಸಿದರು ಸಭಾಧ್ಯಕ್ಷರನ್ನು ಘನವಾಗಿ ಸನ್ಮಾನಮಾಡಿ ಪಂಡಿತರನ್ನು ಸತ್ಕರಿಸಲಾಯಿತು ಸಭಾ ನಿರ್ವಹಣೆಯಲ್ಲಿ ತಿ ತಿ ದೇ ಜೆ ಇ ಓ ಶ್ರೀ ಎ ವೆಂಕಟರಾಮಯ್ಯನವರು ಪಾಲುಗೊಂಡಿದ್ದರು



ಕೃಷ್ಣಾತೀರದ ಶ್ರೀಶೈಲಂ, ಅಮರಾವತಿ, ಸೀತಾನಗರಂ, ವಿಜಯವಾಡ, ವೇದಾದ್ರಿ, ಶ್ರೀಕಾಕುಳಂ, ಪೆನುಮೂಡಿ, ಗಳಲ್ಲಿ ತಿ ತಿ ದೇ ಗ್ರಂಥ ವಿಕ್ರಯ ಶಾಲೆಗಳು ಏರ್ಪಾಡಾಗಿದ್ದು ಎಲ್ಲಕಡೆಯೂ ರಿಯಾಯಿತಿ ದರಗಳಲ್ಲಿ ಪುಸ್ತಕಗಳನ್ನು ಮಾರಾಟ ಮಾಡಲಾಯಿತು ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದರು ಎಲ್ಲಕಡೆಗಳಲ್ಲಿಯೂ ಸಂಚರಿಸಿ ಉಚಿತ ಸಲಹೆಗಳನ್ನು ನೀಡಿ ನಿರಂತರ ಗುಣಮಟ್ಟದ ಅಭಿವೃದ್ಧಿಗೆ ಆದೇಶಗಳನ್ನು ನೀಡುತ್ತ ಇಡೀ ಪುಷ್ಕರಗಳಲ್ಲಿ ತಿ ತಿ ದೇಗಳ ಪಾತ್ರವನ್ನು ಶೋಭಾಯಮಾನವಾಗುವಂತೆ ನೋಡಿಕೊಂಡರು

ಸೆಪ್ಟಂಬರ್ 22 ರಂದು ಬೆಳಗ್ಗೆ ವಿಜಯವಾಡದ ಪದ್ಮಾವತೀ ಸ್ನಾನ ಘಟ್ಟದಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಪುಷ್ಕರಸ್ನಾನದೊಡನೆ ವಿಜಯವಾಡದಲ್ಲಿನ ಸ್ವಾಮಿ ದೇವಾಲಯ ಕೊನೆಗೊಂಡಿತು ಅಂದು ಮಂಗಳವಾರ ಬೆಳಗ್ಗೆ ಏಳುಗಂಟೆಗೆ ತಿ ತಿ ದೇ ದೇವಾಲಯದಿಂದ ಉತ್ಸವಮೂರ್ತಿಗಳನ್ನು ಮೆರವಣಿಗೆಯಲ್ಲಿ ಸಾಮೂಹಿಕ ಭಜನೆ, ನಾದಸ್ವರ ವಿನ್ಯಾಸ, ವೇದ ಪಠಣಗಳ ನಡುವೆ ಬಂದರ್ ರಸ್ತೆಯ ಮೂಲಕ ಬಿಜಯ ಮಾಡಿಸ

ಲಾಯಿತು ಸ್ವಾಮಿಯನ್ನು ಕೃಷ್ಣಾ ನದಿಗೆ ಕರೆತಂದು ಅಲ್ಲಿ ಉಭಯ ನಾಚ್ಚಿಯಾರರೊಡನೆ ತಿರುಮಂಜನ ಗೊಳಿಸಲಾಯಿತು ಈ ಕಾರ್ಯಕ್ರಮದಲ್ಲಿ ಅಶೇಷ ಜನ ಸಂದೋಹ ದೊಡನೆ, ತಿ ತಿ ದೇ ಕಾರ್ಯನಿರ್ವಹಣಾಧಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ಜೆ ಇ ಓ ಶ್ರೀ ಬಿ ವೆಂಕಟರಾಮಯ್ಯ, ಎಕ್ಸಿಕ್ಯೂಟಿವ್ ಇಂಜನಿಯರ್ ಶ್ರೀ ಜೋಗಾರಾವ್, ತಿ ತಿ ದೇ ಪುಷ್ಕರ ವಿಶೇಷಾದಿಕಾರಿ ಶ್ರೀ ಆರ್ ವಾಸುದೇವನಾಯುಡು ಮೊದಲಾದ ಹಿರಿಯರೂ ಪಾಲುಗೊಂಡಿದ್ದರು

ಒಟ್ಟು ಹನ್ನೆರಡು ದಿನಗಳ ಪುಷ್ಕರಗಳಲ್ಲಿ ತಿ ತಿ ದೇ ಗಳ ವಿದ್ಯುತ್, ತೋಟಗಾರಿಕೆ, ಆರೋಗ್ಯ ಇಲಾಖೆಗಳೂ ಮಿಕ್ಕ ಇಲಾಖೆಗಳಿಗೆ ಬೆನ್ನೆಲುಬಾಗಿ ನಿಂತು ಅಹರ್ನಿಶಿ ಕೆಲಸಮಾಡಿದವು. ಆರೋಗ್ಯ ಇಲಾಖೆಯವರ ತುರ್ತುಕರೆಯ ವಾಹನದೊಡನೆ ಆರೋಗ್ಯಾಧಿಕಾರಿ ವೈದ್ಯರೂ, ಹಿರಿಯ ನರ್ಸ್‌ಗಳೂ, ಯಾತ್ರಿಕರ ಅತ್ಯವಸರ ಚಿಕಿತ್ಸೆಗಳನ್ನು ಗಮನಿಸಿದರು

ಪುಷ್ಕರಗಳ ದಿನಗಳಲ್ಲಿ ಹೆಚ್ಚಿನ ಜನಸಾಂದ್ರತೆಗೆ ತಕ್ಕಂತೆ ಸ್ವಯಂಸೇವಾಸಂಸ್ಥೆಗಳೂ ತಮ್ಮ ಪಾಲಿನ ಕರ್ತವ್ಯವನ್ನು ನಿರ್ವಹಿಸಿದವು. ಎನ್ ಸಿ ಸಿ, ಹೋಂಗಾರ್ಡ್ಸ್, ಸ್ಕೌಟ್ಸ್, ಸತ್ಯಸಾಯಿ ಸೇವಾ ಸಂಸ್ಥೆ, ವಿಶ್ವಹಿಂದೂಪರಿಷತ್ ಮೊದಲಾದವುಗಳು ಯಾತ್ರಿಕರಿಗೆ ಸಲಹೆಸೂಚನೆಗಳನ್ನು ನೀಡುವಲ್ಲಿಯೂ, ರಸ್ತೆ ನಿಯಮಗಳನ್ನು ಕಾಪಾಡುವುದರಲ್ಲಿಯೂ, ವಾಹನ ಚಲನ ನಿಯಮಗಳನ್ನು ಆಚರಣೆಗೆ ತರುವಲ್ಲಿಯೂ, ನಗರ ಪರಿಶುಭ್ರತೆಯನ್ನು ಕಾಪಾಡುವುದರಲ್ಲಿಯೂ -- ಬಹಳಷ್ಟು ನೆರವಿಗೆ ಬಂದವು ಎಂಬುದಷ್ಟೇ ಅಲ್ಲದೆ ಸ್ಥಳೀಯವಾಗಿ ಪ್ರಕಟವಾಗುವ ಈನಾಡು, ಆಂದ್ರಜ್ಯೋತಿ, ಆಂಧ್ರಭೂಮಿ, ಉದಯಂ, ಆಂಧ್ರಪ್ರಭ, ಮೊದಲಾದ ಪತ್ರಿಕೆಗಳೂ ಯಾತ್ರಿಕಾವಸರ ವಿಷಯಗಳನ್ನು ದಿನ ದಿನವೂ ಪ್ರಕಟಿಸಿ ಕುಂದುಕೊರತೆಗಳನ್ನು ಎತ್ತಿ ತೋರಿಸಿ ಪರಿಹಾರ ಮಾರ್ಗಗಳನ್ನು ಕಂಡುಕೊಳ್ಳಲು ಸಹಾಯ ನೀಡಿದವು.

## ವೈಭವದ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವ

ತಿರುಮಲೆಯಲ್ಲಿ ಶ್ರೀ ವೆಂಕಟೇಶ್ವರಸ್ವಾಮಿ ಬ್ರಹ್ಮೋತ್ಸವವು 27-9-92 ರಿಂದ 6--10--92 ವರೆಗೆ ನಡೆದು ಯಶಸ್ವಿಯಾಯಿತು ನವರಾತ್ರಿಯ ಹಬ್ಬಗಳಿಗೆ ಹೊಂದಿಕೊಂಡ ಈ ಬಾರಿಯ ಬ್ರಹ್ಮೋತ್ಸವಗಳಲ್ಲಿ ಹೋದವರ್ಷದಷ್ಟು ಜನ ಬರಲಾರದು ಕೃಷ್ಣಾಪುಷ್ಕರಗಳಿಂದಾಗಿ, ಎಂದು ನಿರೀಕ್ಷಿಸಿದ್ದರೂ ಮೊದಲ ನಾಲ್ಕುದಿನ ಸುಮಾರಾಗಿದ್ದ ಯಾತ್ರಿಕ ಸಂದಣಿ ಐದನೆಯದಿನದಿಂದ ಒಮ್ಮೆಲೇ ಹೆಚ್ಚಾಗಿದ್ದು ಕಂಡುಬಂದಿತು ಹೋದ ವರ್ಷದಷ್ಟೇ ಜನ ಎಂದರೆ ಸುಮಾರು ಐದುಲಕ್ಷ ಮಂದಿ ಈ ಉತ್ಸವಗಳ ಸಮಯದಲ್ಲಿ ತಿರುಮಲೆಗೆ ಆಗಮಿಸಿ ಮೆರವಣಿಗೆ, ದರ್ಶನಗಳಲ್ಲಿ ಪಾಲುಗೊಂಡರು ಇದರಿಂದಾಗಿ ತಿ ತಿ ದೇವಸ್ಥಾನಗಳಿಗೆ ಎರಡು ಕೋಟಿ ಎಂಟು ಲಕ್ಷ ರೂಪಾಯಿಗಳ ಆದಾಯವಾಗಿದೆ ಲಾಡುಪ್ರಸಾದ ಮಾರಾಟದಿಂದಲೇ ರೂ 44 5 ಲಕ್ಷಗಳು ಬಂದಿವೆ ಎಂದು ವರದಿಯಾಗಿದೆ

ಬ್ರಹ್ಮೋತ್ಸವದ ಅಂಗವಾಗಿ ವಿವಿಧ ವಾಹನ ಸೇವೆಗಳು ಪ್ರತಿದಿನವೂ ಬೆಳಗ್ಗೆ ಸಾಯಂಕಾಲಗಳಲ್ಲಿ ನಡೆದವು. 2--10--92 ರಂದು ಸಂಜೆ ನಡೆದ ಗರುಡೋತ್ಸವದಲ್ಲಿ ಉತ್ಸವ ಮೂರ್ತಿಗೆ ಲಕ್ಷ್ಮಿಹಾರ, ಮಕರಕಂಠಿಹಾರ ಮೊದಲಾದ ದಿವ್ಯಾಭರಣಗಳನ್ನು ತೊಡಿಸಿ ಮಾಡಿದ ಮೆರವಣಿಗೆಯಲ್ಲಿ ಜನ ಹೆಚ್ಚಾಗಿ ಪಾಲುಗೊಂಡು ಗೋವಿಂದ ನಾಮ ಘೋಷದಿಂದ ಆಕಾಶ ತುಂಬಿತೆಂದು ಹೇಳಬೇಕು ಅಂದು ದರ್ಶನಕ್ಕೂ ವಿಪರೀತ ಸಂದಣಿ ಹಾಗೆಯೇ 5--10--92 ರಂದು ನಡೆದ ರಥೋತ್ಸವದ ದಿನದಂದೂ ವಿಪರೀತ ಯಾತ್ರಿಕ ಸಂದಣಿಯಿದ್ದಿತು ಮಂಗಳವಾರ 6--10--92 ರಂದು ಚಕ್ರಸ್ನಾನವಾಗಿ ಅಲ್ಲಿ ತಿ ತಿ ದೇ ಅಧ್ಯಕ್ಷರು ಶ್ರೀ ಟಿ ಸುಬ್ಬರಾಮಿರೆಡ್ಡಿ, ಕಾರ್ಯನಿರ್ವಹಣಾದಿಕಾರಿ ಶ್ರೀ ಎಂ ವಿ ಎಸ್ ಪ್ರಸಾದ್, ಸಂಯುಕ್ತ ಕಾರ್ಯನಿರ್ವಹಣಾದಿಕಾರಿ ಶ್ರೀ ಟಿ ವೆಂಕಟ್ರಾಮಯ್ಯ ಮೊದಲಾದವರೂ ಭಾಗವಹಿಸಿದ್ದರು

ಬ್ರಹ್ಮೋತ್ಸವಗಳಿಗಾಗಿ ವಿಶೇಷವಾದ ಏರ್ಪಾಡುಗಳನ್ನು ಮೊದಲಿನಿಂದಲೇ ಮಾಡಿಕೊಳ್ಳಲಾಗಿದ್ದಿತು ಹೆಚ್ಚಬಹುದಾದ ಯಾತ್ರಿಕರ ಸೌಕರ್ಯಗಳಿಗಾಗಿ ಹೆಚ್ಚಿನ ಸೇವಾ ಸದುಪಾಯದ ಅವಕಾಶವನ್ನು ಕಲ್ಪಿಸಲು ಪ್ರಯತ್ನಿಸಲಾಯಿತು ಮೊದಲು ಬಂದವರಿಗೆ ಮೊದಲು ಸೂತ್ರದನ್ವಯ ವಸತಿಯೇರ್ಪಾಡು, ಸರತಿಯ ಪಾಲಿನ ವಿಸ್ತೃತ ವ್ಯವಸ್ಥೆ, ತಿರುಮಲೆಯ ನಗರ ನೈರ್ಮಲ್ಯಕ್ಕಾಗಿ ಹೆಚ್ಚಿನ ಸಿಬ್ಬಂದಿ, ಶಾಂತಿ ಭದ್ರತೆಗಳ ಪರಿರಕ್ಷಣೆಗೆ ಹೆಚ್ಚಿನ ಪೋಲೀಸು ಪಡೆ, ಯಾತ್ರಿಕರ ಕುಂದುಕೊರತೆಗಳನ್ನು ಕೇಳಿ ಸಲಹೆ ಸೂಚನೆಗಳನ್ನು ನೀಡಲು ವಿಚಾರಣಾಕೇಂದ್ರಗಳು, ಅಲ್ಲಲ್ಲಿ ಅಲ್ಲಲ್ಲಿ ವಿಶೇಷ ಲಾಡು ಮಾರಾಟದ ಕೇಂದ್ರಗಳನ್ನು ತೆರೆಯಲಾಗಿದ್ದಿತು ಹೆಚ್ಚಿದ ಯಾತ್ರಿಕರ ಅನುಕೂಲಕ್ಕೆ ತಕ್ಕಂತೆ ಉಚಿತ ಭೋಜನ ಸೌಲಭ್ಯವನ್ನೂ ಹೆಚ್ಚಿಸಲಾಗಿದ್ದು, ಕ್ಷುರ ಕರ್ಮವನ್ನೂ ತಕ್ಕಂತೆ ಅನುವುಗೊಳಿಸಲಾಗಿದ್ದಿತು ಯಾತ್ರಿಕರಲ್ಲಿ ಧಾರ್ಮಿಕ ಸಾಹಿತ್ಯವನ್ನು ಪ್ರಸಾರಕ್ಕೆ ತರಲು ವಿಶೇಷ ರಿಯಾಯಿತಿ ದರಗಳಲ್ಲಿ ತಿ ತಿ ದೇ ಧಾರ್ಮಿಕ ಸಾಹಿತ್ಯವನ್ನು ಮಾರಾಟ ಮಾಡಲಾಯಿತು ಇದರ ಮಾರಾಟ ಕೇಂದ್ರಗಳನ್ನು ಹಲವಾರು ಕಡೆ ತೆರೆಯಲಾಗಿದ್ದು ಯಾತ್ರಿಕರು ಎಲ್ಲಿ ಬೇಕೆಂದರಲ್ಲಿ -- ತಿರುಮಲೆಯ ಬಸ್ ನಿಲ್ದಾಣ, ತಿರುಪತಿಯ ಬಸ್ ನಿಲ್ದಾಣ, ತಿರುಮಲೆಯ ಕಲ್ಯಾಣಕಟ್ಟೆ, ಆರ್ಜಿತಂ ಕಚೇರಿ ಟಿ ಬಿ ಏರಿಯಾ ಮುಂತಾಗಿ -- ಪುಸ್ತಕಗಳನ್ನು ಕೊಂಡುಕೊಳ್ಳಬಹುದಾಗಿದ್ದಿತು ಜಗಜಗಿಸುವ ವಿದ್ಯುದ್ದೀಪಗಳ ನೆರವಿನಿಂದಾದ ವಿವಿಧಾಲಂಕಾರಗಳು ಪ್ರತ್ಯೇಕವಾಗಿದ್ದವು. ಜೊತೆಗೇ ತಿ ತಿ ದೇ ಉಪನವ ವಿಬಾಗದವರು ಸಸ್ಯ ಹಸಿರಿನಿಂದ ಮಾಡಿದ ವಿವಿಧಾಕೃತಿಗಳು ಫಲಪುಷ್ಪ ಪ್ರದರ್ಶನಗಳು ಮುದ ನೀಡಿದ್ದವು.

## ನಿರಂತರ ಗೀತಾ ಪ್ರವಚನ

ನಿರಂತರ ಗೀತಾ ಪ್ರವಚನದ ಅಂಗವಾಗಿ ಬೆಂಗಳೂರಿನ ವಿದ್ವಾಂಸರಾದ ಶ್ರೀ ಸಾಣೂರು ಭೀಮ ಭಟ್ಟರಿಂದ ದಿನಾಂಕ 14 ರಿಂದ 23ರ ವರೆಗೆ ಶ್ರೀಕೃಷ್ಣ ಮಠದಲ್ಲಿ ಗೀತೋಪನ್ಯಾಸ ಕಾರ್ಯಕ್ರಮ ನಡೆಯಿತು ಭಗವಂತನ ಜ್ಞಾನಾನಂದ ಮಯತ್ವ ನಿರ್ದೋಷತ್ವಗಳ ಬಗ್ಗೆ ಗೀತೆಯಲ್ಲಿ ವಿವರಿಸಲಾದ ತತ್ವಗಳನ್ನು ಭಾಗವತಾದಿ ಪುರಾಣಗಳ ಹಿನ್ನೆಲೆಯಲ್ಲಿ ವಿವರಿಸಿದರು ಗೀತೆಯಲ್ಲಿ ವಿವರಿಸಲಾದ ಗುಹ್ಯ, ಗುಹ್ಯತರ, ಗುಹ್ಯತಮ ತತ್ವಗಳ ಬಗ್ಗೆಯೂ ಚಿಂತನ ನಡೆಸಿದರು ಸಂಶೋದಕರೂ, ಲೇಖಕರೂ ಆದ ವಿದ್ವಾನ್ ಭೀಮಭಟ್ಟರನ್ನು ಮಂಗಳ ಕಾರ್ಯಕ್ರಮದಂದು ಪರ್ಯಾಯ ಶ್ರೀಪಾದರು, ಗೌರವಿಸಿದರು

ಬೆಂಗಳೂರಿನ ವಿ ಭಾದರಾಯಣಮೂರ್ತಿಗಳಿಂದ 8 ದಿನಗಳ ಕಾಲ ಗೀತೆಯ ಜ್ಞಾನ ವಿಜ್ಞಾನ ಯೋಗದ ಬಗ್ಗೆ ಶ್ರೀಕೃಷ್ಣ ಮಂದಿರದಲ್ಲಿ ಉಪನ್ಯಾಸ ಕಾರ್ಯಕ್ರಮವೂ ನಡೆಯಿತು



# ಮುಂದಿನ ಸಂಚಿಕೆಯಲ್ಲಿ

## ಸಪ್ತಗಿರಿ --- ಡಿಸೆಂಬರ್ 1992

**ಮಾನವ ಮತ್ತು ತುಲಸಿ**

--ಡಾ ಎಸ್ ಜಿ ರಘುಮೋಹನ

**ವೇದಾಂತ ದೇಶಿಕಾಚಾರ್ಯರು**

--ಸಿ ಗೋವಿಂದಾಚಾರ್

**ಧ್ಯಾನಯೋಗ**

--ಕಂದಾಡೈ ಕೇಶವನ್

**ನಾನು ಮತ್ತು ಪಾರ್ಶ್ವವಾಯು**

--ಬ ನ ಗುಂಡೂರಾವ್

**ಮಹಾವಿಷ್ಣುವಿನ 24 ಅವತಾರಗಳು**

--ರಮಸುತ

**ಜೊತೆಗೆ ಆಕರ್ಷಕವಾದ ಮತ್ತೂ ಹಲವಾರು ಸಾಮಯಿಕ ಲೇಖನಗಳು**

**ತಮ್ಮ ಪ್ರತಿಯನ್ನು ಇಂದೇ ಕಾದಿರಿಸಿ.**

ಸೂಚನೆ ಬಿಡಿ ಪ್ರತಿ ಒಂದು ರೂಪಾಯಿ ಮಾತ್ರ ವಾರ್ಷಿಕ ಚಂದಾ ಹನ್ನೆರಡು ರೂಪಾಯಿ ಮಾತ್ರ ತಮ್ಮ ಚಂದಾ ಹಣವನ್ನು ಎಂ ಓ /ಡಿ ಡಿ ಯ ಮೂಲಕ ಸಂಪಾದಕರು, ಸಪ್ತಗಿರಿ, ತಿ ತಿ ದೇ ತಿರುಪತಿ -- ಇವರಿಗೆ ಕಳುಹಿಸಿ

# ತಿಂಗಳಿನ ಮುಖ್ಯದಿನಗಳು

## ಡಿಸೆಂಬರ್ --- 1992

| | |
|---|---|
| 5 ಸೋಮವಾರ | ಗೀತಾಜಯಂತಿ |
| 6 ಭಾನುವಾರ | ಚಕ್ರತೀರ್ಥ ಮುಕ್ಕೋಟಿ |
| 8 ಮಂಗಳವಾರ | ತಿರುಮಂಗೈ ಆಳ್ವಾರ್ ಶಾತ್ತುಮೊರೆ |
| 9 ಬುಧವಾರ | ಕಪಿಲತೀರ್ಥ ಮುಕ್ಕೋಟಿ |
| | ಶ್ರೀ ದತ್ತಜಯಂತಿ |
| | ತಿರುಪ್ಪಾಣಾಳ್ವಾರ್ ವರ್ಷತಿರುನಕ್ಷತ್ರ. |
| | ಚಂದ್ರಗ್ರಹಣ |
| 23 ಬುಧವಾರ | ತೊಂಡರಡಿಪ್ಪೊಡಿ ಆಳ್ವಾರ್ ವರ್ಷತಿರುನಕ್ಷತ್ರ. |



ತಿರುಮಲೆ -- ತಿರುಪತಿ ದೇವಸ್ಥಾನಗಳು

# ಅಭಿಷೇಕ ಸೇವೆಗಳು

ತಿರುಮಲೆ ತಿರುಪತಿ ದೇವಸ್ಥಾನಗಳ ಆಡಳಿತ ಪರಿಧಿಯ ಆರು ದೇವಾಲಯಗಳಲ್ಲಿ ವಾರಕ್ಕೆ ಒಮ್ಮೆ ನಡೆಯುವ ಅಭಿಷೇಕ ಸಮಯದಲ್ಲಿ ಭಕ್ತರು ಒಬ್ಬರಿಗೆ ೫ ರೂಪಾಯಿನಂತ ಶುಲ್ಕ ನೀಡಿ ಅಭಿಷೇಕ ದರ್ಶನ ಹೊಂದಬಹುದು ವಿವಿದೆಡೆಗಳಲ್ಲಿರುವ ಈ ದೇವಾಲಯಗಳೆಂದರೆ---

1 ಶ್ರೀ ವೇದನಾರಾಯಣಸ್ವಾಮಿ ಆಲಯ

--ನಾಗುಲಾಪುರಂ

2 ಶ್ರೀ ಕಲ್ಯಾಣ ವೆಂಕಟೇಶ್ವರಸ್ವಾಮಿ ಆಲಯ

--ನಾರಾಯಣವನಂ

3 ಶ್ರೀ ವೇಣುಗೋಪಾಲಸ್ವಾಮಿ ಆಲಯ

--ಕಾರ್ವೇಟಿನಗರ

4 ಶ್ರೀ ಪ್ರಸನ್ನ ವೆಂಕಟೇಶ್ವರಸ್ವಾಮಿ ಆಲಯ

--ಅಪ್ಪಲಾಯಗುಂಟ

5 ಶ್ರೀ ವೆಂಕಟೇಶ್ವರಸ್ವಾಮಿ ಆಲಯ

--ಶ್ರೀನಿವಾಸಮಂಗಾಪುರ

6 ಆಲಯಸಮುದಾಯ --ಹೃಷೀಕೇಶ

ಭಕ್ತ ಯಾತ್ರಿಕರು ಈ ವಿಶೇಷ ಸೇವೆಯನ್ನು ದರ್ಶಿಸಬೇಕೆಂದು ವಿನಂತಿಸಲಾಗಿದೆ

**ತಿ. ತಿ. ದೇವಸ್ಥಾನಗಳು,**

ತಿರುಪತಿ



Edited and published on behalf of T T Devasthanams by K Subba Rao, M A, and Printed at T T D Press
by M. Vijayakumar Reddy, Manager, T T D Press, Tirupati - 517 507

